# ಜಯಶಾಲಿಗಳು


ಬನಿ ಮತ್ತು ಸ್ನೇಹಿತರು
ಎವರೆಸ್ಟ್ ಪರ್ವತವನ್ನು
ಹತ್ತುತ್ತಿದ್ದರು. ಶಿಖರವನ್ನು
ತಲುಪುವುದಕ್ಕಲ್ಲ—ಅವರ
ಅಬೋಮಿನೇಬಲ್ ಸ್ನೋ. ಮಂಜು
ಮನುಷ್ಯನನ್ನು
ಹುಡುಕಲು ಹೊರಟಿದ್ದರು.


ಹೇ! ಹೆಜ್ಜೆ ಗುರುತುಗಳು
ಇವು ಎಲ್ಲಿಂದ
ಬಂದಿವೆ ?
ಬಹುಶಃ ಇವು
ಯೇಟಿಯದೇ ಇರಬೇಕು.


ಅವರಿಗೆ ಒಂದು
ಒಳ್ಳೆಯ ಉಪಾಯ
ಹೊಳೆಯಿತು...
ಈ ಮಿಠಾಯಿಗಳಿಂದ
ಅವನಿಗೆ ದಾರಿ ಮಾಡಿ
ನಾವು ಅವಿತುಕೊಂಡು
ಕಾಯೋಣ


ಆದರೆ ಅವರು ಕಾದೂ ಕಾದೂ
ಸಾಕಾಯಿತು...ಬಹಳ ಹೊತ್ತು


ನಾವು ಸಾಕಷ್ಟು
ಹೊತ್ತು ಕಾದಿದ್ದಾಯಿತು
ಬನಿ, ಹೋಗಿ ನೋಡೋಣ


ಅವರಿಗೆ
ಆಶ್ಚರ್ಯವಾಗುವಂತೆ
ನೀವು ನನ್ನನ್ನು
ಹಿಡಿಯಲಾರಿರಿ! ಆದರೆ
ನಿಮ್ಮ ಮಿಠಾಯಿಗಳು
ನಿಜಕ್ಕೂ ಉತ್ಕೃಷ್ಟ
ತಿನಿಸುಗಳು ! —ಯೇಟಿ.


ಇದುವರೆಗೆ ಯಾರೂ ಮಂಜು
ಮನುಷ್ಯನನ್ನು ಕಂಡು—
ಹಿಡಿದಿಲ್ಲ. ಆದರೆ ಅಂತಹ
ಭಾರಿ ಹಿಡಿಯಲಾರದಂತಹ
ವ್ಯಕ್ತಿಯಿಂದ ನಾವು ಭಾರಿ
ಸರ್ಟಿಫಿಕೇಟ್ ತಂದಿದ್ದೇವೆ.

# "ತೋಳ ತೋಳ" ಕಥೆಯಲ್ಲಿ ನ್ಯೂಟ್ರೀನ್ ಬನಿ

ಅರಣ್ಯದಲ್ಲಿ ಪ್ರಶಾಂತವಾದ, ತಂಪಿನ ದಿನದ, ಒಂದು ಬೆಳಿಗ್ಗೆ...

ರಕ್ಷಿಸಿ!

ಅದು ರೆಡ್ ರೈಡಿಂಗ್ ಹುಡ್‌ನ ಧ್ವನಿ ಇದ್ದಂತಿದೆ...

ಕಷ್ಟದಲ್ಲಿದ್ದಂತಿದೆ.

ಬನಿ ಮತ್ತು ಸ್ನೇಹಿತರು ಧ್ವನಿ ಬಂದ ದಿಕ್ಕಿನಲ್ಲೇ ಹೋಗುವರು

ಅವರುಗಳು ಮನೆ ತಲುಪಿದ್ದಂತೆ.

ಅಗೋ, ದುಷ್ಟ ತೋಳ ಓಡುತ್ತಿದೆ ಬನ್ನಿ ಹಿಡಿಯೋಣ!

ಅದು ಜೋರಾಗಿ ಓಡುವುದು, ಆದರೆ...

ಬನಿ ಈ ರಸ್ತೆಯಲ್ಲಿ

ಬನಿ ಮತ್ತು ಸ್ನೇಹಿತರು ಆ ದೊಡ್ಡ ದುಷ್ಟ ತೋಳನನ್ನು ಸಂಧಿಸಲು ಹತ್ತಿರದ ದಾರಿ ಹಿಡಿಯುವರು

...ಬನಿ ಜಾಣತನದಿಂದ ಹೆಣೆದ ಜಾರುಗುಣಿಕೆಗೆ ಸಿಕ್ಕಿಕೊಂಡಿತು

ಸಿಕ್ಕಿ ಬಿದ್ದೆಯ ದುಷ್ಟ ತೋಳವೆ!

ಈ ತರಹದೊಡ್ಡ ದುಷ್ಟ ತೋಳ ಸಿಕ್ಕಿ ಬಿತ್ತು... ...ಮರವೊಂದಕ್ಕೆ ಬಂಧನವಾಗಿ

ಅಜ್ಜೀ, ಇವರು ಕಟ್ಟಿ ಕಷ್ಟವಾಗಿದೆಯೋ

ನಿನಗೆ ಮಿಠಾಯಿಗಳೂ ಸಿಕ್ಕುವುದಿಲ್ಲ!

ಜೇಜೇ ಏಳಿರಿ. ಹೋಗೋಣ ಬನ್ನಿರಿ... ಪುಟಾಣಿಗಳೇ, ಮತ್ತೆ ನೋಡೋಣ. ನಿಮಗೆ ಮಧುರ ಕನಸುಗಳು ಬೀಳಲಿ!

## ನ್ಯೂಟ್ರೀನ್

ಪ್ರತಿನಿತ್ಯವು ಮಿಠಾಯಿ-
ರಸದೌತಣ ನಂಬಾಯಿ!

nutrine

CAS NC 62-82 KN

**Statement about ownership of CHANDAMAMA (Kannada)**
**Rule 8 (Form VI), Newspapers (Central) Rules, 1956**

| | | | |
|---|---|---|---|
| 1. | *Place of Publication* | ... | 'CHANDAMAMA BUILDINGS'<br>188, Arcot Road<br>Vadapalani, Madras-600 026 |
| 2. | *Periodicity of Publication* | ... | MONTHLY<br>1st of each calendar month |
| 3. | *Printer's Name* | ... | B. V. REDDI |
| | *Nationality* | ... | INDIAN |
| | *Address* | ... | Prasad Process Pvt Limited<br>188, Arcot Road, Vadapalani<br>Madras-600 026 |
| 4. | *Publisher's Name* | ... | B. VISWANATHA REDDI |
| | *Nationality* | ... | INDIAN |
| | *Address* | ... | Chandamama Publications<br>188, Arcot Road, Vadapalani<br>Madras-600 026 |
| 5 | *Editor's Name* | ... | **B. NAGI REDDI** |
| | *Nationality* | ... | INDIAN |
| | *Address* | ... | 'Chandamama Buildings'<br>188, Arcot Road, Vadapalani<br>Madras-600 026 |
| 6. | *Name & Address of individuals who own the paper* | ... | CHANDAMAMA CHILDREN'S TRUST FUND<br>Beneficieries: |

1. B. V. HARISH
2. B. V. NARESH
3. B. V. L. ARATI
4. B. L. NIRUPAMA
5. B. V. SANJAY
6. B. V. SHARATH
7. B. L. SUNANDA
8. B. N. RAJESH
9. B. ARCHANA
10. B. N. V. VISHNU PRASAD
11. B. L. ARADHANA
12. B. NAGI REDDI (JR)

All Minors, by Trustee:
M. UTTAMA REDDI, 14, V.O.C. Street, Madras-600 024

I, B. Viswanatha Reddi, hereby declare that the particulars given above are true to the best of my knowledge and belief.

*1st March* 1982

**B. VISWANATHA REDDI**
*Signature of the Publisher*

# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ

---

ನಾವು ಒಂದು ಕೆಲಸವನ್ನು ಕುರಿತು ಯಾರೊಡನಾದರೂ ಆಲೋಚನೆ ಕೇಳಿದರೆ, ಆಲೋಚನೆ ಹೇಳುವವರಿಗೆ ತಾನು ಇವನಿಗಿಂತ ಬುದ್ಧಿವಂತನೆಂಬ ಹೆಮ್ಮೆ ಬರುವುದುಂಟು. ಆಗ ಅವರು ತಾನು ಹೇಳುವ ಯೋಚನೆ ಅತ್ಯುತ್ತಮವೆಂಬ ಧೋರಣೆಯಲ್ಲಿ ಹೇಳುತ್ತಾರೆ. ಅದನ್ನು ತನ್ನ ಬುದ್ಧಿ ಶಕ್ತಿಯಿಂದ ತೂಗಿ ನೋಡಿಕೊಳ್ಳದೆ, ಅವರು ಹೇಳಿದಂತೆ ಕಣ್ಣು ಮುಚ್ಚಿ ಮಾಡುವುದರಿಂದ ಯಾವ ಪರಿಣಾಮ ಬರುತ್ತದೆಂಬುದಕ್ಕೆ "ಉಚಿತ ಸಲಹೆ" ಎಂಬ ಈ ಸಂಚಿಕೆಯಲ್ಲಿರುವ ಒಂದು ಕಥೆ ಉದಾಹರಣೆಯಾಗಿದೆ.

## ಅಮರವಾಣಿ

**ಪರನಿಂದಾಸು ಪಾಂಡಿತ್ಯಂ ಸ್ವೇಷು ಕಾರ್ಯೇಷ್ವನುದ್ಯಮಃ**
**ಪ್ರದ್ವೇಷಶ್ಚ ಗುಣಜ್ಞೇಷು ಪಂಥಾನೋ ಹ್ಯಾಪದಾಂ ತ್ರಯಃ**

ಇತರನ್ನು ನಿಂದಿಸುವ ಜಾಣತನ, ಸ್ವಂತ ಕಾರ್ಯಗಳಲ್ಲಿ ಉದಾಸೀನತೆ, ಸುಗುಣಿಗಳ ಮೇಲೆ ದ್ವೇಷ ಇವುಗಳು ಪತನಕ್ಕೆ ಒಯ್ದು ಬೀಳಿಸುವ ದಾರಿಗಳಾಗಿವೆ.

---

ಸಂಪುಟ : ೬೮ ಮಾರ್ಚಿ '೮೨ ಸಂಚಿಕೆ : ೩

ಬಿಡಿ ಪ್ರತಿ ರೂ. ೧–೬೫ : : ವಾರ್ಷಿಕ ಚಂದಾ ರೂ. ೨೧-೦೦





# ಹದಿನಾರಾಣೆ ಸ್ನೇಹ

ಒಂದು ಊರಿನಲ್ಲಿ ಅಮಲೆ ಎಂಬ ಹುಡುಗಿ ಚಿಕ್ಕಂದಿನಲ್ಲೇ ತಾಯಿಯನ್ನು ಕಳೆದುಕೊಂಡು, ಮಲತಾಯಿಯ ಆ ರೈಕೆಯಲ್ಲಿ ಕಷ್ಟಪಡುತ್ತಾ ಬೆಳೆದು ಮದುವೆಯಾಗಿ, ಗಂಡನ ಮನೆಗೆ ಬಂದಳು. ಅದು ಅವಳಿಗೆ ಪ್ರಕಾಶಮಾನವಾದ ಹೊಸ ಜೀವನವೆನಿಸಿತು. ಮನೆಯನ್ನೆಲ್ಲಾ ಒಮ್ಮೆ ತಿರುಗಾಡಿ ನೋಡಿದಳು. ತನ್ನ ಅದೃಷ್ಟವನ್ನು ನಂಬುವುದೇ ಅವಳಿಗೆ ಕಷ್ಟವಾಯಿತು. ದೊಡ್ಡ ಮನೆ. ಮನೆ ತುಂಬಾ ನೌಕರರು. ಇದೆಲ್ಲಾ ಒಂದು ಸ್ವಪ್ನವೇನೋ ಎಂದು ಭ್ರಮಿಸಿಕೊಂಡಳು.

ಸುಮಾರು ಮೂರು ತಿಂಗಳ ಹಿಂದೆ ಒಂದು ದಿನ ಸಾಯಂಕಾಲ ಅವಳು ಹರಿಯುವ ಕಾಲುವೆಯಿಂದ ನೀರು ತುಂಬಿಸಿಕೊಂಡು ಮನೆಗೆ ಹಿಂದಿರುಗಿ ಕೊಂಡಿದ್ದಳು. ದಾರಿಯಲ್ಲಿ ಸುಂದರನಾದ ಯುವಕ ನೊಬ್ಬನು ಇದಿರಾಗಿ ಬರುತ್ತ, ಥಕ್ಕನೆ ನಿಂತು ಒಂದೆರಡು ಕ್ಷಣ ಅವಳನ್ನು ಪರೀಕ್ಷಿಸಿ ನೋಡಿ, "ತಪ್ಪಾಗಿ ತಿಳಿದು ಬಿಡಬೇಡ. ಒಂದು ಮಾತು. ನನ್ನ ಹೆಸರು ಸುದರ್ಶನನೆಂದು. ನಿನ್ನ ಹೆಸರೇನು ? ನಿಮ್ಮ ಮನೆ ಎಲ್ಲಿದೆ ?" ಎಂದು ಕೇಳಿದನು.

ಅಪರಿಚಿತನೊಬ್ಬನು ಹೀಗೆ ಪ್ರಶ್ನಿಸುವುದನ್ನು ನೋಡಿ, ಅಮಲೆ ಹೆದರುತ್ತಾ ಅವನ ಪ್ರಶ್ನೆಗೆ ಉತ್ತರ ಕೊಡುವವಳ ಹಾಗೆ ಗೊಣಗಿಕೊಂಡು ಬೇಗಬೇಗನೆ ತನ್ನ ಮನೆಗೆ ಹೋಗಿ ಸೇರಿದಳು.

ಮುಂದೆ ಹತ್ತು ದಿನಗಳ ಮೇಲೆ ಅದೇ ಸುದರ್ಶನನು ತನ್ನ ತಾಯಿಯನ್ನು ಕರೆದುಕೊಂಡು ಅಮಲೆಯ ತೌರು ಮನೆಗೆ ಬಂದನು. ಅಸಲು ಸಂಗತಿ ಅಮಲೆಗೆ ಆಗ ಗೊತ್ತಾಯಿತು. ಈ ಮೊದಲು ಸುದರ್ಶನನು ಕಾಲುವೆಯ ದಾರಿಯಲ್ಲಿ ಅವಳನ್ನು ಮಾತಾಡಿಸಿದ ದಿನ, ಅವನ ತಾಯಿ ತಂದೆಯರೊಂದಿಗೆ ಒಬ್ಬಳು ಕನ್ಯೆಯನ್ನು ನೋಡಲು ಬಂದಿದ್ದರಂತೆ, ಆ ಕನ್ಯೆಯ ತಂದೆ ಸುದರ್ಶನನ ತಂದೆಗೆ ಒಳ್ಳೆಯ ಸ್ನೇಹಿತರಂತೆ.

ಆದರೆ ಅತಿಯಾಗಿ ಸಿಂಗರಿಸಿಕೊಂಡು. ವಾಚಾಳಿಯಂತೆ, ಭಿಡೆಭಾರವೇನಿಲ್ಲದೆ ವರ್ತಿಸಿದ ಆ ಕನ್ಯೆ ಸುದರ್ಶನನಿಗೆ ಹಿಡಿಸಲಿಲ್ಲವಂತೆ. ಆದರಿಂದ ಅವನ ತಂದೆ ತಾಯಿಯರು ಕೋಪಗೊಂಡು ಮುಂದಾಗಿ ಹೊರಟು ಹೋದರಂತೆ. ಸುದರ್ಶನನು ಹಿಂದಿನಿಂದ ಸಾವಕಾಶವಾಗಿ ಹೋಗುವ ದಾರಿಯಲ್ಲಿಯೇ ಅಮಲೆಯನ್ನು ನೋಡಿ ಮಾತಾಡಿಸಿದ್ದನು. ಆಮೇಲೆ

ಎಂ. ಕೆ. ಈಶ್ವರರಾವು

ಅವಳ ಹಿಂದೆಯೇ ಹೋಗಿ ಅವಳ ಮನೆಯನ್ನೂ, ಇತರ ವಿವರಗಳನ್ನೂ ತಿಳಿದು, ತಂದೆತಾಯಿಯರೊಂದಿಗೆ ಹುಡುಗಿ ನೋಡಲು ಬಂದಿದ್ದನು. ಹೀಗೆ ನಡೆದಿತ್ತು ಅಮಲೆಯ ಮದುವೆ.

ಅಮಲೆಯ ಸವತಿ ತಾಯಿ ಅವಳ ಅದೃಷ್ಟವನ್ನು ನೋಡಿ ತನ್ನೊಳಗೆ ತುಂಬಾ ಕರುಬಿಕೊಂಡಳು. ಆದರೂ ಮದುವೆಗೆ ಒಪ್ಪಿ ಸಹಕರಿಸಿದ್ದಳು.

ಗಂಡನ ಮನೆಗೆ ಬಂದ ಮೇಲೆ, ಸುದರ್ಶನನು ತನ್ನನ್ನು ಮದುವೆಯಾದುದು ಅವನ ತಂದೆಗೆ ಇಷ್ಟವಿಲ್ಲವೆಂದೂ, ಮಗನ ಒತ್ತಾಯದಿಂದಲೇ ಅವರು ಮಣಿದುದೆಂದೂ ಅಮಲೆಗೆ ಗೊತ್ತಾಯಿತು. ಮಗನು ತನ್ನ ಮಿತ್ರನ ಮಗಳನ್ನು ಬೇಡವೆಂದನಲ್ಲಾ ಎಂಬುದು ಅವರ ನೋವು.

ಆಮೇಲೆ ಒಂದು ದಿನ ಗಂಡನೊಂದಿಗೆ, "ಒಂದು ವಿಷಯ ಹೇಳಲೇ? ಈ ಊರಿನಲ್ಲಿ ನನಗೆ ಸ್ನೇಹಿತರಾಗಿರುವ ಒಳ್ಳೆಯವರೊಬ್ಬರು ಇಲ್ಲೆಲ್ಲಿಯೋ ಇದ್ದಾರೆ. ನಮ್ಮ ಮದುವೆಗೆ ಬಂದಿರುವರೇನೋ ಅಂತ ನೋಡಿದೆ. ಕಾಣಲೇ ಇಲ್ಲ. ಅವರನ್ನೊಮ್ಮೆ ನೋಡಿದರೆ ಎಷ್ಟು ಒಳ್ಳೆಯದಿತ್ತು!" ಎಂದಳು.

"ಈ ಊರಲ್ಲಿ ನಿನಗೆ ಸ್ನೇಹಿತರೋ? ಯಾರಪ್ಪಾ ಅವರು?" ಎಂದು ಸುದರ್ಶನ ಆಶ್ಚರ್ಯದಿಂದ ಕೇಳಿದನು.

"ಆಶ್ಚರ್ಯಪಡಬೇಡಿ. ಆ ಸ್ನೇಹಿತರ ಕಥೆ ಹೇಳುತ್ತೇನೆ. ಕೇಳಿ" ಎಂದು ಅಮಲೆ ನಡೆದ ಸಂಗತಿಯನ್ನು ಹೇಳಿದಳು.

ಅಮಲೆ ಚಿಕ್ಕತನದಲ್ಲೇ ತಾಯಿಯನ್ನು ಕಳೆದುಕೊಂಡು, ಮಲತಾಯಿ ಬಂದ ಮೇಲೆ, ಚಾಕರಿ ಹುಡುಗಿಯಂತೆಯೇ ಬೆಳೆಯ ಬೇಕಾಯಿತು. ಹತ್ತು ವಯಸ್ಸು ಕೂಡಾ ತುಂಬದ ಆಟದ ಹುಡುಗಿಯಿಂದ ನಾನಾ ಚಾಕರಿ ಮಾಡಿಸುತ್ತಿದ್ದಳು. ಶಾಲೆಗೆ ಅವಳನ್ನು ಕಳುಹಿಸಲೇ ಇಲ್ಲ. ತಂದೆ ಎರಡನೇ ಹೆಂಡತಿಯ



ಆಟದಬೊಂಬೆಯ ಹಾಗೆ ಮಾರ್ಪಟ್ಟು ಬಿಟ್ಟಿದ್ದನು. ಹಾಗಿರುವಾಗ ಮಲತಾಯಿಯ ತಮ್ಮನಿಗೆ ಮದುವೆ ನಿಶ್ಚಯವಾಯಿತು. ಅವಳು ಹತ್ತು ದಿನಗಳ ಮೊದಲೇ ಮದುವೆಗೆ ಹೋಗುತ್ತ, ಮನೆಯ ಕೋಣೆಗಳಿಗೆಲ್ಲ ಬೀಗ ಹಾಕಿ, ಇದಿರಿನ ಕೋಣೆಯಲ್ಲಿ ಒಂದು ಕುಮ್ಮಟಿಯನ್ನು ಅಮಲೆಗಾಗಿ ಇಟ್ಟಿದ್ದಳು.

"ನಾನು ಹತ್ತು ದಿನಗಳಲ್ಲಿ ತಿರುಗಿ ಬರುತ್ತೇನೆ. ನಾನು ಕೊಡುವ ಈ ಇಪ್ಪತ್ತು ಆಣೆಗಳಿಂದ ಮಜ್ಜಿಗೆಯೋ ಸೊಪ್ಪೋ ಸೊದೆಯೋ ತಗೊಂಡು ಮಹಾರಾಣಿಯ ಹಾಗೆ ಬೇಸಿಕೊಂಡು ತಿನ್ನು" ಎಂದು ಹೇಳಿ ಇಪ್ಪತ್ತು ಆಣೆಗಳನ್ನು ಅಮಲೆಗೆ ಕೊಟ್ಟು ಮಕ್ಕಳೊಂದಿಗೂ ಗಂಡನೊಂದಿಗೂ ಮಲತಾಯಿ ಹೊರಟುಹೋದಳು.

ಅಮಲೆ ಎರಡು ಹೊತ್ತಿಗೆ ಸರಿಯಾಗುವಷ್ಟು ಅಡಿಗೆ ಮಾಡಿಕೊಂಡು ಮಧ್ಯಾಹ್ನ ಊಟವಾದ ಮೇಲೆ, ಕಿಟಿಕಿಯ ಹತ್ತಿರ ಕುಳಿತುಕೊಂಡು



ಗುತ್ತವೆ, ಸಹಾಯಮಾಡಿದರೆ ಆ ಹಣವನ್ನು ಕೂಡಲೇ ನನ್ನ ನೌಕರನ ಹತ್ತಿರ ಕೊಟ್ಟು ಕಳುಹಿಸುತ್ತೇನೆ" ಎಂದು ದೀನನಾಗಿ ಕೇಳುತ್ತಿದ್ದನು.

ಯಾರೂ ಅವನಿಗೆ ಸಹಾಯಮಾಡದೆ ಅವರ ಪಾಡಿಗೆ ಹೋಗುತ್ತಿದ್ದರು. ಇದನ್ನು ನೋಡಿ ಅಮಲೆಗೆ ತುಂಬಾ ಕನಿಕರ ಉಂಟಾಯಿತು. ಅವಳು ಬಾಗಿಲ ಹತ್ತಿರ ಹೋಗಿ ಅವನನ್ನು, "ಅಯ್ಯಾ" ಎಂದು ಹತ್ತಿರ ಕರೆದು, "ಹದಿನಾರಾಣೆ ಇರಲಿ. ಊಟ ಆಗಿದೆಯೆ ?" ಎಂದು ಕೇಳಿದಳು.

"ಊಟ ಬಿಡಮ್ಮ ಮಗೂ. ಮೊದಲು ಊರು ಸೇರಿದರೆ ಸಾಕಾಗಿದೆ" ಎಂದನು ಆ ದೀನ.

"ಹದಿನಾರಾರಾಣೆ ನಾನು ಕೊಡುತ್ತೇನೆ. ಸ್ವಲ್ಪ ಊಟವೂ ಇದೆ. ಬನ್ನಿ" ಎಂದು ಅಮಲೆ ಅವನಿಗೆ ಅನ್ನವನ್ನೂ ಮಜ್ಜಿಗೆಯನ್ನೂ ಹಾಕಿ, ಹುಳಿಪಲ್ಲೆ ಯನ್ನೂ ಬಡಿಸಿದಳು.

ಅವನು ಊಟಮಾಡುತ್ತ, ಅವಳ ಹೆಸರು ಕೇಳಿ, ಏನೇನೋ ಸಮಾಚಾರ ಹೇಳಿದನು. ಅದನ್ನೆಲ್ಲ ಕೇಳುವಾಗ ಅಮಲೆಗೆ ನಗು ಬಂದಿತು.

"ನಿಮ್ಮ ಊರು ಯಾವುದು?" ಎಂದು ಅಮಲೆ ಕೇಳಿದಳು. ನದಿಯಾಚೆಗಿನ ನಿನ್ನ ಹೆಸರಿನ ಅಮಲಾ ಪುರವೇ" ಎಂದು ನಕ್ಕನು.

ಅವನು ಮೈ ಮೇಲೆ ಹಾಕಿಕೊಳ್ಳಲು ತನ್ನ ಬಿಳೀ ಧಾವಣಿಯನ್ನು ಅವನಿಗೆ ಕೊಟ್ಟಳು. ಅದರ ಹರಕು ಕಾಣದಂತೆ ಅವನು ಅದನ್ನು ಹೊದ್ದುಕೊಂಡು, "ನಾನು ಊರಿಗೆ ಹೋಗಿ ನಿನಗೆ ಪಟ್ಟೇ ಧಾವಣಿ ಕಳುಹಿಸಿಕೊಡುತ್ತೇನೆ" ಎಂದನು.

ಅಮಲೆ ತಂದು ಕೊಟ್ಟ ಹದಿನಾರು ಆಣೆಗಳನ್ನು ತೆಗೆದುಕೊಳ್ಳುವಾಗ ಅವನ ಕೈಗಳು ನಡುಗಿದುವು. ಕಣ್ಣುಗಳೂ ನೆನೆದುವು.

"ಮಗೂ, ನೀನು ಎಂದಾದರೂ ನಮ್ಮ ಊರಿಗೆ ಬರುವ ಕೆಲಸವಿದ್ದರೆ ನನ್ನ ಮನೆಗೆ ಖಂಡಿತಾ ಬರಬೇಕು.

ಬೀದಿಯನ್ನು ನೋಡುತ್ತಾ ಕಾಲಕಳೆಯುವಳು. ಹೀಗೆ ಒಂಟಿಯಾಗಿ ಸುಮ್ಮನೆ ಹೊತ್ತು ಕಳೆಯುವುದು ಅವಳಿಗೆ ಬೇಸರವೆನಿಸಿ, ತಾನು ಕೇಳಿ ಕಲಿತುಕೊಂಡಿದ್ದ ದೇವರ ನಾಮಗಳನ್ನು, ಸಣ್ಣಗೆ ಹಾಡಿಕೊಂಡಿರುವಳು, ದೇವರನ್ನು ನೆನೆಯುತ್ತಾ.

ಒಂದು ದಿನ ಮಧ್ಯಾಹ್ನದ ಹೊತ್ತಿನಲ್ಲಿ ಸೊಂಟ ದಲ್ಲಿ ಕಟ್ಟಿಕೊಂಡ ಒಂದು ಪಂಚೆಯ ಹೊರತು, ಮತ್ತೇನೂ ಇಲ್ಲದ ಬಡಿಗ್ಯೆಯವನೊಬ್ಬನು, ಹಾಗೆ ಬಂದು ಬೀದಿಯಲ್ಲಿ ನಿಂತು ಹೋಗಿ ಬರುವವ ರೊಡನೆ ಕೈ ನೀಡಿ, "ಅಯ್ಯಾ, ಒಂದು ಮಾತು. ನಾನು ಭಿಕ್ಷುಕನಲ್ಲ. ಗ್ರಹಣಸ್ನಾನ ಮಾಡಲು ಸಮುದ್ರಕ್ಕೆ ಬಂದೆ. ಬಟ್ಟೆಬರೆಗಳನ್ನೆಲ್ಲಾ ತೀರದಲ್ಲಿಟ್ಟು ಸ್ನಾನಮಾಡುವಾಗ ಅದನ್ನೆಲ್ಲ ಯಾರೋ ಎತ್ತಿಕೊಂಡು ಹೋದರು. ನನ್ನ ಊರಿಗೆ ಬಾಡಿಗೆಯ ಗಾಡಿಯಲ್ಲಿ ರೇವಿನವರೆಗೆ ಹೋಗಿ ದೋಣಿ ಹತ್ತಿ ನದಿ ದಾಟಬೇಕು. ಅದಕ್ಕೆ ಒಟ್ಟು ಹದಿನಾರು ಆಣೆಗಳಾ

ಈ ವಯಸ್ಸಿನಲ್ಲಿ ನನ್ನ ಮನಸ್ಸಿನ ಭಾವನೆ ನಿನಗೆ ಅರ್ಥವಾಗಲಿಕ್ಕಿಲ್ಲ. ಕಷ್ಟದಲ್ಲಿ ಒತ್ತಾಸೆಮಾಡಿದವರೇ ನಿಜವಾದ ಬಂಧುಗಳು. ಒಂದು ತುಂಡು ಕಾಗದ ಇದ್ದರೆ ಕೊಡುವೆಯಾ? ನನ್ನ ಹೆಸರು ವಿಳಾಸ ಬರೆದು ಕೊಡುತ್ತೇನೆ" ಎಂದನು ಆ ದೀನ.

ಅಮಲೆ ಮೂಲೆ ಹಲಿಗೆಯಿಂದ, ಅವಳ ತಮ್ಮನ ಕಾಗದವನ್ನೂ, ಅಪ್ಪನ ಲೇಖನಿ ಮಸಿ ದೌತಿಯನ್ನೂ ಅವನಿಗೆ ಕೊಟ್ಟಳು. ಅವನು ತನ್ನ ಹೆಸರು ವಿಳಾಸಗಳನ್ನು ಬರೆದು ಕೊಟ್ಟು ಆಶೀರ್ವಾದ ಹೇಳಿ ಹೊರಟು ಹೋದನು.

ಓದಲು ಬಾರದ ಅಮಲೆ ಆ ಕಾಗದವನ್ನು ತನ್ನ ಬಟ್ಟೆಗಳ ಅಡಿಯಲ್ಲಿ ಇಟ್ಟುಕೊಂಡಳು. ಎರಡು ದಿನಗಳ ಮೇಲೆ ಒಬ್ಬನು ಅಮಲೆಯ ಬಳಿಗೆ ಬಂದು, ಒಂದು ಪಟ್ಟೆಯ ಧಾವಣಿಯನ್ನೂ, ನೂರು ರೂಪಾಯಿಗಳನ್ನೂ ಅಮಲೆಗೆ ಕೊಟ್ಟು, "ಅಮಲಾಪುರಕ್ಕೆ ಬಂದಾಗ ತಪ್ಪದೆ ಮನೆಗೆ ಬರಬೇಕೆಂದು ರಾಘವಯ್ಯಾ ಹೇಳಿದ್ದಾರೆ. ಇವನ್ನು ನಿಮಗೆ ಬಹುಮಾನವಾಗಿ ಕೊಟ್ಟಿದ್ದಾರೆ" ಎಂದು ಹೇಳಿ ಹೊರಟುಹೋದನು. ಆ ನೂರು ರೂಪಾಯಿಗಳಲ್ಲಿ ಹನ್ನೆರಡಾಣೆ ಖರ್ಚಾಗುವಾಗ ಅಮಲೆಯ ಮಲತಾಯಿ ಮದುವೆ ಮನೆಯಿಂದ ತನ್ನ ಮನೆಗೆ ಬಂದೇ ಬಂದಳು. ಅಮಲೆ ನಡೆದ ಸಮಾಚಾರ ಹೇಳಿದಳು. "ಸರಿ ಸರಿ, ಆ ಹಣ ಇತ್ತಕೊಡು. ಬಂದವನು ಒಳ್ಳೇವನಾದ್ರಿಂದ ಸರಿಹೋಯ್ತು. ಕಳ್ಳಗಿಳ್ಳ ಆಗ್ತಿದ್ರೆ ಏನಾಗ್ತಿತ್ತೊ ! ಅದಕ್ಕೇ ನಾನು ಎಲ್ಲಾ ಒಳಗಿಟ್ಟು ಬೀಗಹಾಕಿದ್ದು !" ಎಂದು ಹೇಳಿ ಹಣವನ್ನೂ ಪಟ್ಟೇ ಧಾವಣಿಯನ್ನೂ ಸಹಾ ಮಲತಾಯಿ ತೆಗೆದು ಭದ್ರಪಡಿಸಿಕೊಂಡಳು.

ಇದಾದ ಮೂರೇ ತಿಂಗಳಲ್ಲಿ ಅಮಲೆಯ ತಂದೆ ರೋಗಕ್ಕೆ ಬಲಿಯಾಗಿ ತೀರಿ ಹೋದನು. ಮಲತಾಯಿಯ ತೌರೂರು ದೂರದ ಒಂದು ಗ್ರಾಮ. ಬೇರೆ ದಿಕ್ಕಿಲ್ಲದುದರಿಂದ ಮಕ್ಕಳನ್ನೂ ಅಮಲೆಯನ್ನೂ ಕರೆದುಕೊಂಡು ಮಲತಾಯಿ ಆ ಊರಿಗೆ ಹೋದಳು. ಅಲ್ಲಿ ಅಮಲೆ ಇನ್ನಷ್ಟು ಹೆಚ್ಚಿನ ಚಾಕರಿ ಮಾಡ



ಬೇಕಾಯಿತು. ಅಮಲೆ ಗಂಡನೊಂದಿಗೆ ಈ ಕಥೆಯನ್ನೆಲ್ಲಾ ಹೇಳಿ, "ಮದುವೆ ನಿಶ್ಚಯವಾಗುವುದಕ್ಕೆ ಮೊದಲ ನಿಮ್ಮದು ಅಮಲಾಪುರವೆಂದು ತಿಳಿದು ನನಗೆ ಬಹಳ ಸಂತೋಷವಾಯಿತು. ನನಗೆ ತಂದೆಯ ಪ್ರೇಮ ಎಂತಹುದೆಂದು ಗೊತ್ತಾದ್ದು ಅವರಿಂದಲೇ, ನನ್ನನ್ನು ನೋಡಿದರೆ, ನಾನು ಮಾತ್ರವಲ್ಲ, ಅವರೂ ಸಂತೋಷಪಡುವರು " ಎಂದಳು.

"ಅದೆಲ್ಲಾ ಸರಿಯೆ, ಆದರೆ ಅವರ ಹೆಸರು ಮನೆ ಎಲ್ಲಿದೆ ಎಂದು ಗೊತ್ತಾಗಬೇಡವೇನು ? ನಿನಗೆ ಓದಲು ಬಾರದ್ದು ಎಷ್ಟು ತೊಂದರೆಯಾಯಿತು ನೋಡಿದಿಯಾ ? ಅವರು ಬರೆದು ಕೊಟ್ಟ ಕಾಗದವಾದರೂ ಇದೆಯೆ ?" ಎಂದನು ಸುದರ್ಶನ.

ಅಮಲೆ " ಅವರ ಆಳು ರಾಮಯ್ಯಾ ಅಂದ ಹಾಗೆ ನೆನಪು. ಎನ್ನುತ್ತ ತನ್ನ ಪೆಟ್ಟಿಗೆಯ ಅಡಿಯಲ್ಲಿ ಭದ್ರವಾಗಿಟ್ಟಿದ್ದ ಆ ಕಾಗದವನ್ನು ತಂದು ಗಂಡನಿಗೆ ಕೊಟ್ಟಳು. ಅದನ್ನು ನೋಡಿದ ಕೂಡಲೇ ಸುದರ್ಶನನು " ಅರೆ!" ಎಂದು ಇಷ್ಟಗಲ ಕಣ್ಣರಳಿಸಿ " ಅಮಲಾ! ಚಿಕ್ಕಂದಿನಲ್ಲಿ ನಿನಗೆ ಆ ದಿನ ಗಂಟುಬಿದ್ದ ಧರ್ಮಾತ್ಮ ದೊಡ್ಡ ಸ್ನೇಹಿತರು ಯಾರು ಗೊತ್ತಾ? ರಾಮಯ್ಯ ಅಲ್ಲ, ಬೇರೆ ಯಾರೂ ಅಲ್ಲ, ನನ್ನ ಅಪ್ಪ ರಾಘವಯ್ಯನೇ !" ಎಂದನು. ಒಮ್ಮೆಗೇ ಆದ ಆಶ್ಚರ್ಯ ಆನಂದಗಳಿಂದ ಅಮಲೆ ಪುಲಕಿತಳಾದಳು. ವಯಸ್ಸಿನೊಂದಿಗೆ ಮುಖದಲ್ಲಿ ಬಿದ್ದ ಮಾರ್ಪಾಡುಗಳಿಂದ, ತಲೆ ಕೂದಲು ಹೆಚ್ಚಿಗೆ ಹಣ್ಣಾದುದರಿಂದ ಅವಳು ತನ್ನ ಹೊಸ ಮಾವಯ್ಯನ ಗುರುತು ಹಿಡಿಯಲಾರದೆ ಹೋದಳು. ಹಾಗೆಯೇ ಅವರಿಗೂ ಅಮಲೆಯ ಹೆಸರು ನೆನಪಿದ್ದರೂ, ಆಗ ಮಾಸಿದ ಬಟ್ಟೆಯಲ್ಲಿದ್ದ ಅವಳ ಗುರುತು ಈಗ ಸಿಗದಾಗಿತ್ತು !

ಸುದರ್ಶನ ಆ ಕಾಗದವನ್ನು ತಂದೆಗೆ ತೋರಿಸಿ, "ಇದರ ಗುರುತು ಏನಾದರೂ ಗೊತ್ತಾಗುತ್ತದೆಯೇ? " ಎಂದು ಕೇಳಿದನು.

ಸುದರ್ಶನನ ತಂದೆ ಆ ಕಾಗದವನ್ನೂ, ಅಮಲೆಯನ್ನೂ ನೋಡುತ್ತ, "ಆ! ನೀನೇನಾ ಅದು? ಆ ದಿನ ನನ್ನನ್ನು ಕಾಪಾಡಿದವಳು ನೀನೇನಾ? ವಿಮಲೆಯಲ್ಲ, ಅಮಲೆ! ಎಂಥ ಯೋಗದ ಮಹತ್ವ!" ಎನ್ನುವಾಗ ಅವರ ಕಣ್ಣಿನಲ್ಲಿ ಆನಂದಬಾಷ್ಪ ಸುರಿಯಿತು.

"ನಿಮ್ಮಿಬ್ಬರ ಈ ಸ್ನೇಹ ಬಂಧ ಎಷ್ಟು ಗಟ್ಟಿಯಾಯಿತು! ಎಂಟು ವರ್ಷಗಳ ಮೇಲೆ ಮತ್ತೆ ಕೂಡಿಸಿತು!" ಎಂದ ಸುದರ್ಶನ.

"ತುಂಬಿದ ಹದಿನಾರಾಣೆ ಸ್ನೇಹವೆಂದರೆ ಅಂಥಾದ್ದು!" ಎಂದರು ರಾಘವಯ್ಯ. ಇನ್ನು ಅವರಲ್ಲಿ ಮಗನ ಮೇಲೆ ಕೋಪಕ್ಕೆ ತಾವೆಲ್ಲಿ ?






## ೪

[ತನ್ನ ಕೋಟೆ ಕುಂಡಲಿನೀ ಸೈನಿಕರಿಗೆ ವಶವಾಗಿ ಹೋಗಲು, ಮಂದರದೇವನು ನಾಲ್ವರು ಸೈನಿಕರೊಂದಿಗೆ ದೋಣಿಗಳಲ್ಲಿ ಸಮುದ್ರದ ಮೇಲೆ ಹೊರಟನು. ಅದೇ ಸಮಯದಲ್ಲಿ ದೋಣಿಗಳಲ್ಲಿ ಬರುತ್ತಿದ್ದ ಮಂದರ ದೇವನನ್ನು ಅಟಕಾಯಿಸಲು, ಅವರೊಡನೆ ಯುದ್ಧ ಮಾಡಬೇಕಾಯಿತು. ಕಡೆಗೆ ಅವರು ಶತ್ರುಗಳಲ್ಲವೆಂದೂ, ಶಿವದತ್ತನೆಂದೂ ತಿಳಿದು, ಇಬ್ಬರೂ ಸ್ನೇಹದಿಂದ ಕೂಡಿ ಮಾತುಕತೆಗೆ ತೊಡಗಿದರು.]

**ಹಿಂ**ದೆ ಕುಂಡಲಿನೀ ಸೇನಾಧಿಪತಿಯಾಗಿದ್ದ ಸಮರ ಸೇನನ ಸಂಗಾತಿಯಾದ ಶಿವದತ್ತನು ಹೇಳಿದ ಮಾತುಗಳನ್ನು ಕೇಳಿ ಮಂದರದೇವನಿಗೆ ಬಹಳ ಆಶ್ಚರ್ಯವಾಯಿತು. ಕಷ್ಟಪರಂಪರೆಗಳಲ್ಲಿ ನಲುಗಿ ದೊಡ್ಡ ಅನುಭವಶಾಲಿಯಾಗಿ ರಾಜನ ಬಲಗೈಯಾಗಿ ಅತ್ಯಂತ ಧೈರ್ಯಶಾಲಿಯಾಗಿದ್ದ ಸಮರ ಸೇನನಿದ್ದು ಕೂಡಾ, ಕುಂಡಲಿನೀ ದ್ವೀಪ ರಾಜ್ಯವನ್ನು ಪಾಲಿಸುವುದರಲ್ಲಿ ಹೇಗೆ ತಪ್ಪಾಗಿ ವರ್ತಿಸಿದರೆಂಬುದು ಅವನಿಗೆ ಅರ್ಥವಾಗಲಿಲ್ಲ. ಅಪರಿಚಿತವಾದ ಭಯಂಕರ ದ್ವೀಪದಲ್ಲಿ ಅಪಾರವಾದ ಸಾಹಸ ಕೃತ್ಯಗಳಿಂದ ಜಯಶಾಲಿಯಾಗಿ ಕುಂಡಲಿನಿಗೆ ಅಷ್ಟೊಂದು ಸಂಪತ್ತಿನೊಂದಿಗೆ ಹಿಂದಿರುಗಿದ್ದನಲ್ಲಾ ? ಆ ಸಂಪತ್ತಿನಿಂದ ಕುಂಡಲಿನೀ ದ್ವೀಪಕ್ಕೆ ಎಷ್ಟೋ ಮೇಲುಂಟಾಗಬೇಕಿತ್ತು, ಅದಕ್ಕೆ ಬದಲಾಗಿ ಅತಲ ಪಾತಾಲಕ್ಕೆ ಕುಂಡಲಿನೀ ದ್ವೀಪರಾಜ್ಯವು ಬೀಳುವುದೆಂದರೇನಿದು ?

"ಶಿವದತ್ತಾ, ಸಮರಸೇನನು, ನ್ಯಾಯವಾದ ರೀತಿಯಲ್ಲಿ ಮಂತ್ರಗಳ ದ್ವೀಪದಿಂದ ತಂದ ಧನ ರಾಶಿಯು ನಾಕೆಯಿಂದ ನಿಮಗೆ ಸಕಲ ವಿಧವಾದ ಸೌಖ್ಯಗಳೂ ಉಂಟಾಯಿತೆಂದು ನಾನು ಭಾವಿಸಿ



"ಹಾಗಾದರೆ ಮತ್ತೇನು ? ಕುಂಡಲಿನೀ ದ್ವೀಪದ ಪ್ರತಿಯೊಬ್ಬರೂ ಸರ್ವಸುಖಗಳನ್ನೂ ಅನುಭವಿಸುವ ರೆಂದಾಯಿತಲ್ಲಾ ? " ಎಂದನು ಮಂದರದೇವ.

"ಮಂದರದೇವರಾಜಾ, ಅವಸರಪಡದೆ ಸಾವಧಾನವಾಗಿ ಪೂರ್ತಿ ಹೇಳುವುದನ್ನು ಕೇಳೋಣಾಗಲಿ." ಎಂದು ಶಿವದತ್ತನು ಗಂಟಲು ಕೆನೆದು ಹೇಳಲು ಪ್ರಾರಂಭಿಸಿದನು :

"ಯಾವಾಗ ಧನಾಗಾರವು ಬೆಳ್ಳಿ, ಬಂಗಾರ ಮಣಿ ಮಾಣಿಕ್ಯಗಳಿಂದ ತುಂಬಿಸೂಸ ತೊಡಗಿತೋ ಆಗಲೇ ರಾಜನಾದ ಚಿತ್ರಸೇನನಿಗೆ ರಾಜ್ಯಪಾಲನೆಯ ವಿಷಯಗಳಲ್ಲಿ ಆಸಕ್ತಿ ಕುಂಠಿಸುತ್ತಾ ಹೋಯಿತು. ಬೇಕಾದಷ್ಟು ಧನರಾಶಿಯಂತೂ ಇದೆ ; ಇನ್ನು ದೇಶದ ಪ್ರಜೆಗಳಿಗೆ ಕಷ್ಟವೇನಿದೆ ? ಸಮಸ್ಯೆ ಏನಿದೆ ? ಎಂದು ಮಹಾಸೇನಾಧಿಪತಿ ಸಮರಸೇನನಿಗೂ ತೋರಿತು. ನನಗೆ ಕೂಡಾ ಹಾಗೆಯೇ ಅನಿಸಿತು.

ಚಿತ್ರಸೇನ ಮಹಾರಾಜನು ಉದ್ಯೋಗಸ್ಥರಿಗೂ, ಅಧಿಕಾರಿಗಳಿಗೂ ಸಂಬಳಗಳನ್ನು ಹೆಚ್ಚಿಸಿದನೆಂದು ಹೇಳಿದೆನಷ್ಟೆ? ಆ ಹಣದಿಂದ ಅವರು ಆಮೋದ ವಿಲಾಸಗಳಲ್ಲಿ ಮಗ್ನರಾಗ ತೊಡಗಿದರು. ಇನ್ನು ಹಳ್ಳಿಗಳಲ್ಲಿರುವ ಬೇಸಾಯಗಾರರು ಕೂಡಾ ರಾಜನಿಗೆ ಯಾವ ತೆರಿಗೆಯನ್ನೂ ಕಟ್ಟುವ ಆಗತ್ಯವಿಲ್ಲದೆ ಹೋದುದರಿಂದ ಅವರಿಗೂ ಸೊಂಟ ಬಗ್ಗಿಸಿ ಕೆಲಸ ಮಾಡಬೇಕೆಂಬ ತರಾತುರಿ ತಗ್ಗಿತು. ಅವರು ತಮ್ಮ ಕುಟುಂಬ ಪೋಷಣೆಗೆ ಅಗತ್ಯವಿರುವಷ್ಟು ಧಾನ್ಯಗಳನ್ನೂ, ತರಕಾರಿಗಳನ್ನೂ ಬೆಳೆಸಿಕೊಂಡು, ಉಳಿದ ಹೊಲಗದ್ದೆಗಳನ್ನು ಹಡಿಲು ಬೀಳಿಸಿ ಬಂಜರುಗೊಳಿಸ ತೊಡಗಿದರು. ಆದರಿಂದ ಧಾನ್ಯಗಳನ್ನು ಕೊಂಡುಕೊಳ್ಳಬೇಕಾದವರಿಗೆ ಆಹಾರಪದಾರ್ಥಗಳು ಸರಿಯಾಗಿ ಸಿಗದಾದುವು. ಪಟ್ಟಣಗಳಿಗೆ ಆಹಾರಪದಾರ್ಥಗಳ ರವಾನೆ ತಗ್ಗಿತು. ಪಟ್ಟಣದ ಜನರು ಗುಂಪುಗುಂಪಾಗಿ ಗ್ರಾಮಗಳಿಗೆ ಹೊರಟು ಆಹಾರಪದಾರ್ಥಗಳನ್ನು,

ಕೊಂಡಿದ್ದೆ. ಇಂಥ ವಿಪರೀತ ಹೇಗಾಯಿತು ? " ಎಂದು ಮಂದರದೇವನು ಕೇಳಿದುದನ್ನು ಕೇಳಿ ಶಿವದತ್ತನು ನಕ್ಕನು.

"ಮಂದರದೇವಾ, ಆ ಧನರಾಶಿಗಳೇ ಕುಂಡಲಿನೀ ದ್ವೀಪದ ಅರಾಜಕದ ತಾಂಡವಕ್ಕೆ ಕಾರಣವಾಯಿತೆಂದು ತಿಳಿ ! ನಾವು ಆ ನಾವೆಯೊಂದಿಗೆ ಕುಂಡಲಿನೀ ದ್ವೀಪವನ್ನು ತಲಪಿದಾಗ ರಾಜನಾದ ಚಿತ್ರಸೇನನೂ ಪ್ರಜೆಗಳೂ ನಮಗೆ ಮಾಡಿದ ಸ್ವಾಗತವೇನು, ಸಂಭ್ರಮವೇನು, ಉತ್ಸಾಹವೇನು ! ಎಡೆಬಿಡದೆ ಒಂದು ತಿಂಗಳವರೆಗೆ ರಾಜಧಾನೀ ನಗರವು ಆನಂದೋತ್ಸವಗಳಿಂದ ಮೆರೆಯಿತು. ಚಿತ್ರಸೇನನು ಪ್ರಜೆಗಳ ಮೇಲೆ ನಾಮಮಾತ್ರಕ್ಕಿರುವ ತೆರಿಗೆಗಳನ್ನು ಕೂಡಾ ತೆಗೆದು ಹಾಕಿದನು. ಉದ್ಯೋಗಸ್ಥರ ಸಂಬಳಗಳನ್ನೆಲ್ಲ ಎರಡು ಪಾಲು ಹೆಚ್ಚಿಸಿದನು. ದೊಡ್ಡದೊಡ್ಡ ಅಧಿಕಾರಿಗಳಿಗೆ ಮೂರು ನಾಲ್ಕು ಪಾಲಿನಷ್ಟು ಹೆಚ್ಚು ಸಂಬಳವಾಯಿತು " ಎಂದನು.

ಸ್ಪರ್ಧೆಗಿಳಿದವರಂತೆ ಒಬ್ಬರಿಗೊಬ್ಬರು ಹೆಚ್ಚಿಗೆ ಬೆಲೆ ಕೊಟ್ಟು ಕೊಂಡು ಕೊಳ್ಳತೊಡಗಿದರು. ಆ ವಿಧವಾಗಿ ತಮ್ಮ ಹತ್ತಿರ ಸೇರಿದ ಹಣದಿಂದ. ಏನು ಕೊಂಡು ಕೊಳ್ಳುವುದೆಂದು ತಿಳಿಯದ ಗ್ರಾಮಸ್ಥರಿಗೆ, ಹಣದ ಗಂಟು ನೋಡುವುದೇ ಒಂದು ಆನಂದವೆನಿಸಿ, ಬತ್ತ ಮೊದಲಾದ ಧಾನ್ಯಗಳಿಗೂ ತರಕಾರಗಳಿಗೂ ಇನ್ನಿಷ್ಟು ಬೆಲೆ ಹೆಚ್ಚಿಸಿ ಸ್ಪರ್ಧೆಗೆ ಬಿದ್ದು ಹಣ ಮಾಡ ತೊಡಗಿದರು.

ರಾಜ್ಯವು ಒಂದು ಬಗೆಯ ಅರಾಜಕ ಪರಿಸ್ಥಿತಿಯ ಅಂಚಿಗೆ ಹೋಯಿತು. ದೊಡ್ಡ ದೊಡ್ಡ ಮೊತ್ತಗಳನ್ನು ಕೊಟ್ಟು ಆಹಾರಧಾನ್ಯಗಳನ್ನು ಕೊಂಡುಕೊಳ್ಳಲಾಗದ ಪಟ್ಟಣವಾಸಿಗಳು ಗುಂಪು ಸೇರಿಸಿಕೊಂಡು, ರಾತ್ರಿಯ ಹೊತ್ತಿನಲ್ಲಿ ಬೇರೆಬೇರೆ ಗ್ರಾಮಗಳ ಮೇಲೆ ಬಿದ್ದು ದೋಚಿಕೊಳ್ಳಲು ತೊಡಗಿದರು. ಇದಕ್ಕೆ ಪ್ರತಿಯಾಗಿ ಗ್ರಾಮಗಳಲ್ಲಿರುವವರು ಬತ್ತದ ಚೀಲದಷ್ಟು ಬಂಗಾರವು ಬೆಲೆಯೆಂದು ನಿರ್ಣಯಿಸಲು ತೊಡಗಿದರು. ಅವರು ಕೂಡಾ ಗುಂಪು ಸೇರಿಸಿಕೊಂಡು ಕೈಗೆ ಸಿಕ್ಕಿದ ಆಯುಧಗಳಿಂದ ದೋಚಿಕೊಳ್ಳುವವರನ್ನು ಇದಿರಿಸಿ ಆತ್ಮರಕ್ಷಣೆ ಮಾಡಿಕೊಳ್ಳಬೇಕಾಯಿತು.

ಹೀಗೆಲ್ಲಾ ತಾರುಮಾರು ನಡೆಯುತ್ತಿರುವ ಸಮಾಚಾರ ಚಿತ್ರಸೇನ ಮಹಾರಾಜನಿಗೆ ಗೊತ್ತಾಗಲೇ ಇಲ್ಲ, ನಿಜ ಹೇಳ ಬೇಕಾದರೆ ಅವನೊಂದಿಗೆ ನನಗೂ ಸಮರಸೇನನಿಗೆ ಕೂಡಾ ಅದಾವುದೂ ತಿಳಿಯದು. ನಾವು ಕೂಡಾ ದೇಶದ ಯಾವ ಮೂಲೆಯಲ್ಲಿ ಏನು ನಡೆಯುತ್ತದೆಂಬುದನ್ನು ತಿಳಿಯುವ ಗೋಜಿಗೆ ಹೋಗಲಿಲ್ಲ. ಧನಾಗಾರದಿಂದ ಪ್ರವಾಹದ ಹಾಗೆ ಹರಿಯುವ ಧನವನ್ನು ಉಪಯೋಗಿಸುವವರು ಬಹಳಮಂದಿ ಇದ್ದಾರೆ. ಸಂತೋಷದಿಂದಲೇ ಕೇಳಿದಷ್ಟು ಹಣ ಕೊಡಲಾಗುತಿತ್ತು. ಹೀಗಾಗಿ ಆಹಾರ ಪದಾರ್ಥಗಳ ಬೆಲೆ ಸಾವಿರ ಪಾಲು ಹೆಚ್ಚಾಗಿ ಎಷ್ಟುಧನವಿದ್ದರೂ ಸಾಕೆನಿಸುತ್ತಿರಲಿಲ್ಲ.

ಇನ್ನು ರಾಜನ ವಿಷಯಕ್ಕೆ ಬಂದರೆ, ಚಿತ್ರಸೇನ ಮಹಾರಾಜನು ತನ್ನ ವಿನೋದಗಳಿಗಾಗಿ ಏರ್ಪಡಿಸಿದ ಆಟಗಳು ತುಂಬಾ ವಿಚಿತ್ರ ಮಾತ್ರವಲ್ಲ, ಬಲು



ಘೋರ ! ಈಗ ಆಲೋಚಿಸಿದರೆ ಅದನ್ನು ವಿನೋದ ಪ್ರದರ್ಶನವೆನ್ನಲು ನಾಚಿಕೆಯಾಗುತ್ತದೆ. ಆದರೆ ಆಗಿನ ದಿನಗಳಲ್ಲಿ ಅದನ್ನು ನೋಡಿ ಆನಂದಿಸಲು ದೂರದೂರದಿಂದ ಕೂಡಾ ನೂರಾರು ಜನರು ಸಾಲುಸಾಲಾಗಿ ಬರುವರು. ಅವೆಂಥ ಪ್ರದರ್ಶನ ಗಳೆಂದು ಗೊತ್ತೇ?

ಆಗಲೇ ಕಾಡಿನಿಂದ ಹಿಡಿದು ತಂದ ಕ್ರೂರ ವಾದೊಂದು ಸಿಂಹವನ್ನು ಕಬ್ಬಿಣದ ಕಟಕಟೆಯ ವಠಾರದೊಳಗೆ ಬಿಡುವರು. ಅದನ್ನು ಯಾರಾದರೂ ಸರಿಯೇ ಖಡ್ಗ ಮಾತ್ರದ ಸಹಾಯದಿಂದ ಸಂಹರಿಸಿ ದವರಿಗೆ ಸತ್ತ ಸಿಂಹದಷ್ಟು ಭಾರಕ್ಕೆ ಬಂಗಾರವನ್ನು ಬಹುಮಾನ ಕೊಡುವರು. ಧನದ ಆಶೆಯಿಂದ ಅನೇಕಮಂದಿ ಸಾಹಸೀ ಯುವಕರು ಸಿಂಹದೊಂದಿಗೆ ಹೋರಾಡಲು ಬರುತ್ತಾರೆ. ದುರದೃಷ್ಟವಂತರು ಸಿಂಹಕ್ಕೆ ಬಲಿಯಾಗುತ್ತಾರೆ. ಅದೃಷ್ಟವಂತರು ಅದನ್ನು ಕೊಂದು ಬಂಗಾರ ಹೊತ್ತುಕೊಂಡು ಮನೆಸೇರಿ ಸುಖ ಪಡುತ್ತಾರೆ.

ಬರು ಬರುತ್ತ ಈ ವಿನೋದವು ಇನ್ನಷ್ಟು ಕ್ರೂರವೂ ಅನಾಗರಿಕವೂ ಆಯಿತು. ಆನೆಗಳ ಹೋರಾಟ, ಆನೆಗೂ ಸಿಂಹಕ್ಕೂ ಕಾದಾಟ, ಆನೆ ಗಳಿಂದ ತುಳಿಸಿಕೊಳ್ಳುವ ಬಲ ಪ್ರದರ್ಶನ, ಮುಂತಾದ ರೀತಿಗಳಿಗೇ ತಿರುಗಿತು. ನಾನು ಸಮರಸೇನನಿಗೆ ಇದರಲ್ಲಿರುವ ಕ್ರೌರ್ಯವನ್ನು ಕುರಿತು ಹೇಳಿ ನೋಡಿದೆ. ಆದರೆ ಅವನಿಗೆ ನನ್ನ ಮಾತಿನ ಮೇಲಿ ಗಿಂತಲೂ, ಹಿಂದೆ ಮಂತ್ರಗಳ ದ್ವೀಪದಲ್ಲಿ ಅವ ನೊಂದಿಗಿದ್ದ ನರವಾಹನ ಮಿತ್ರನೆಂಬ ಸೈನಿಕನ ಮಾತಿನ ಮೇಲೆ ಹೆಚ್ಚು ಲಕ್ಷ್ಯವಿದ್ದಿತು.

'ಧನಾಗಾರದಲ್ಲಿ ಧನಕ್ಕೆ ಎಂದಿಗೂ ಕೊರತೆ ಬರಲಿಕ್ಕಿಲ್ಲ. ನಮ್ಮ ದೇಶದ ಪ್ರಜೆಗಳನ್ನು ಧೈರ್ಯ ವಂತರಾಗಿ, ಸಾಹಸವಂತರಾಗಿ ಮಾಡುವ ಬಾಧ್ಯತೆ ಕೂಡ ನಮ್ಮ ಮೇಲಿದೆ. ಹಾಗಿರುವಾಗ ರಾಜನು




ವಿನೋದಕ್ಕಾಗಿ ಇಂತಹ ಆಟಗಳನ್ನು ಏರ್ಪಡಿಸಿದರೆ ತಪ್ಪೇನು ಬಂತು ?' ಎನ್ನುತ್ತಿದ್ದನು.

ರಾಜನೂ, ರಾಜಾಧಿಕಾರಿಗಳೂ ಈ ಬಗೆಯ ವಿನೋದ ಕೂಟಗಳಲ್ಲಿ ಮಗ್ನರಾಗಿರುವಾಗ, ಗ್ರಾಮ ಪ್ರಾಂತಗಳಲ್ಲಿ ಬಹಳ ವಿಚಿತ್ರವಾದ ಬದಲಾವಣೆಗಳು ಬರತೊಡಗಿದ್ದುವು.

ಅಲ್ಲಿ ಸ್ವಲ್ಪ ಬಲಿಷ್ಠನಾಗಿಯೂ ಬಾಯಿ ಇರು ವವನಾಗಿಯೂ ಇರುವ ಪ್ರತಿಯೊಬ್ಬನೂ ಒಂದು ಚಿಕ್ಕರಾಜನ ಹಾಗೆ ಆಗಿಬಿಟ್ಟನು. ಕೆಲಮಂದಿ ಅನುಚರರನ್ನು ಸಂಪಾದಿಸುವುದೂ, ಪಕ್ಕದ ಗ್ರಾಮದ ಮೇಲೆ ದಾಳಿ ಮಾಡಿ ಅವರನ್ನು ವಶಪಡಿಸಿಕೊಳ್ಳು ವುದೂ ನಡೆದಿತ್ತು. ಈ ವಿಧವಾಗಿ ಒಂದೇ ರಾಜ್ಯ ದೊಳಗೆ ಅನೇಕ ಚಿಕ್ಕ ಚಿಕ್ಕ ಭಾಗಗಳು ಏರ್ಪಟ್ಟುವು. ಈ ಸಂಗತಿ ಪ್ರಜೆಗಳೊಂದಿಗೆ ಪೂರ್ತಿ ಸಂಬಂಧವನ್ನು ಕಳೆದುಕೊಂಡ ಚಿತ್ರಸೇನ ರಾಜನಿಗೂ, ರಾಜ್ಯದ ಉದ್ಯೋಗಸ್ಥ ಅಧಿಕಾರಿಗಳಿಗೂ ಗೊತ್ತೇ ಆಗಲಿಲ್ಲ.




ಅಲ್ಪ ಸ್ವಲ್ಪ ನನಗೆ ತಿಳಿದು ಅದನ್ನು ನಾನು ಹೇಳಿದಾಗ, ನನ್ನ ಮಾತಿಗೆ ಯಾರೂ ಲಕ್ಷ್ಯಕೊಡಲಿಲ್ಲ. ಭಯಶೀಲನೆಂದು ನನಗೇ ಗೇಲಿ ಮಾಡಿದರು.

ದೇಶದೊಳಗಿನ ವರ್ತಕ ವ್ಯಾಪಾರಗಳೂ, ವ್ಯವಸಾಯವೂ ಪೂರ್ತಿ ಹಾಳಾದುವು. ಅನೇಕರು ಒಬ್ಬರನ್ನು ಕುರಿತು ಇನ್ನೊಬ್ಬರು ಬೈಯುವುದೂ, ಸಿಟ್ಟಿನಿಂದ ಕೆರಳುವುದೂ ಹೆಚ್ಚಾಯಿತು. ಯಾವುದಕ್ಕೂ ಹೇಸದ ಕೆಲವರು ಪ್ರತ್ಯೇಕ ಗುಂಪುಗಳಾಗಿ, ತಲೆಮರೆಸಿಕೊಂಡು ಕೊಳ್ಳೆಗಾರರಾಗಿ ಪಟ್ಟಣಗಳನ್ನೂ, ಗ್ರಾಮಗಳನ್ನೂ ದೋಚಿಕೊಳ್ಳತೊಡಗಿದರು. ದರೋಡೆ ಪ್ರಾರಂಭವಾದ ಮೇಲೆ ಬಹು ಬೇಗದಲ್ಲೇ ಚಿತ್ರಸೇನನ ಪರಿಪಾಲನೆ ಎಂಬುದು ರಾಜಭವನದ ಪ್ರಾಂಗಣದಲ್ಲಷ್ಟೇ ಪರಿಮಿತವಾಯಿತು. ದೇಶದಲ್ಲಿ ರಾಜನನ್ನು ನೆನೆಯುವವನೇ ಇಲ್ಲ. ನಾಯಿಕೊಡೆಗಳಂತೆ ದೇಶದಲ್ಲೆಲ್ಲಾ ರಾಜರೂ, ಮಹಾರಾಜರೂ, ಸಾಮ್ರಾಟರೂ ತಲೆಯೆತ್ತಿದರು.

ಒಂದು ದಿನ ಸಾಯಂಕಾಲ ಚಿತ್ರಸೇನ ರಾಜನಿಗೇ ಬಿಸಿ ಮುಟ್ಟುವ ಸಂಭವ ನಡೆಯಿತು. ಅವನು ವಿನೋದ ಪ್ರದರ್ಶನವನ್ನು ನೋಡುತ್ತ ಆನಂದದಲ್ಲಿರುವ ಸಮಯದಲ್ಲಿ, ಯಾವನೋ ಒಬ್ಬ ದೂತನು ಬಂದು, ಒಂದು ಪತ್ರವನ್ನು ರಾಜನಿಗೆ ಕೊಟ್ಟನು. ರಾಜನು ಅಲಕ್ಷ್ಯವಾಗಿ, ಅದನ್ನು ನೋಡುವಂತೆ ಸಮರಸೇನನ ಕೈಗೆ ಕೊಟ್ಟನು. ಅದನ್ನು ಓದುತ್ತಿದ್ದಂತೆ ಸಮರಸೇನನ ಮುಖದ ಕಳೆ ಕಪ್ಪಾಗಿ ಕಂದತೊಡಗಿತು. ಒಮ್ಮೆಗೇ ಅವನ ಮುಖದ ರಕ್ತವೆಲ್ಲಾ ಇಂಗಿ ಹೋಗಿ ಬಿಳಿಚಿಕೊಂಡಿತು.

ಅವನು ರಾಜನ ಕಿವಿಯಲ್ಲಿ ನಡುಗುವ ಸ್ವರದಿಂದ ಸಣ್ಣ ದನಿಯಲ್ಲಿ 'ಮಹಾರಾಜಾ, ತುಂಬಾ ಅವಸರದ ಅಗತ್ಯ ವಿಷಯವಿದೆ. ಈ ಪ್ರದರ್ಶನವನ್ನು ಇಲ್ಲಿಗೇ ನಿಲ್ಲಿಸಿ, ನಮ್ಮ ಭವನದ ಅಂತರಂಗದ ಮಂದಿರಕ್ಕೆ ಹೋಗಬೇಕು. ರಾಜ್ಯಾಂಗವನ್ನು ಕುರಿತು ಬಹು ಬೇಗನೇ ಆಲೋಚನೆ ಮಾಡಬೇಕಾಗಿದೆ!' ಎಂದನು.

'ಹಾಗೇನು ತಲೆಹೋಗುವ ಕಾರ್ಯ ಬಂತಯ್ಯಾ! ನೀನೇ ಹೋಗಿ ನಿವೃತ್ತಿಪಡಿಸಿಬಿಡು' ಎಂದನು ಚಿತ್ರಸೇನ ಆಟದ ಲವಲವಿಕೆಯಿಂದ ಕಾಲನ್ನು ಕೀಳಲಾಗದೆ.

'ಇಲ್ಲ ಪ್ರಭೂ, ನಡೆಯಿರಿ. ತಮಗೇ ಸಂಬಂಧಪಟ್ಟದ್ದು!' ಎಂದು ಸಮರಸೇನನು ಒತ್ತಾಯಿಸಲು ಇಷ್ಟವಿಲ್ಲದ ಮನಸ್ಸಿನಿಂದ ಚಿತ್ರಸೇನನು ಅಲ್ಲಿಂದ ಹೊರಟನು. ಆಗ ನಾನು ಅಲ್ಲಿಂದ ಹೊರಡಲು ನೋಡಿದೆ. ಸಮರಸೇನನು ನನ್ನನ್ನು ನಿಲ್ಲಿಸಿ, 'ಶಿವದತ್ತಾ, ಬಹುಮುಖ್ಯ ಕೆಲಸ. ನೀನು ನಮ್ಮ ಜೊತೆಗೇ ಇರಬೇಕು' ಎಂದನು.

ನಾವು ಮೂವರು ಮಹಾರಾಜನ ರಹಸ್ಯ ಮಂದಿರವನ್ನು ಸೇರಿದೆವು. ಸಮರಸೇನನು ದೂತ ತಂದುಕೊಟ್ಟ ಪತ್ರವನ್ನು ತೋರಿಸಿ, ಹೀಗೆಂದನು. 'ಇಷ್ಟು ಕಾಲದವರೆಗೆ ನಾವು ಕಣ್ಣೆದ್ದೂ ಇಲ್ಲದವರಂತೆ ಆದೆವು. ಈ ಕುಂಡಲಿನೀ ದ್ವೀಪದಲ್ಲಿ ನಮಗೆ



ತಿಳಿಯದಂತೆಯೇ ಕೆಲವು ರಾಜರೂ ಮಹಾರಾಜರೂ, ಹುಟ್ಟಿಕೊಂಡಿದ್ದಾರೆ. ಅವರಲ್ಲಿ ಕೆಲವರು ಸೇರಿ ನಮಗೆ ಈ ಸಂದೇಶ ಕಳುಹಿಸಿದ್ದಾರೆ. ನಮ್ಮ ಮಹಾರಾಜರನ್ನು ಏಕ ವಚನದಲ್ಲಿ ಸಂಬೋಧಿಸಿ ಈ ಪತ್ರವನ್ನು ಆಜ್ಞೆಯ ರೀತಿಯಲ್ಲಿ ಕಳಿಸಿದ್ದಾರೆ. ದುಷ್ಟನೂ ಅಸಮರ್ಥನೂ ಆದ ರಾಜನನ್ನು ತೊಲಗಿಸಿಬಿಡುತ್ತಾರಂತೆ. ಒಳ್ಳೆಯ ಮಾತಿನಲ್ಲಿ ಸಿಂಹಾಸನವನ್ನು ಅವರ ವಶಕ್ಕೆ ಒಪ್ಪಿಸಿ ಬಿಡಬೇಕಂತೆ. ಅವರಿಗೆ ಶರಣಾಗತರಾಗುವುದೇ ಜೀವದಿಂದಿರುವ ಮಾರ್ಗವಂತೆ ನಮಗೆ! ಕೊನೆಯ ಸಂದೇಶವಂತೆ ಇದು.'

ಇಷ್ಟು ಕೇಳಿದ ಮೇಲೆ ಚಿತ್ರಸೇನ ಮಹಾರಾಜನಿಗೆ ಇಷ್ಟು ಕಾಲ ಹಿಡಿದುಕೊಂಡಿದ್ದ ನಿದ್ದೆಯು ಮತ್ತು ಬಿಟ್ಟ ಹಾಗಾಯಿತು. ಹಠಾತ್ತಾಗಿ ನಿದ್ದೆಯಿಂದೆದ್ದವನಂತೆ ಸಮರಸೇನನನ್ನು ದೊಡ್ಡ ಕಣ್ಣುಗಳಿಂದ ನೋಡಿದನು. ನೆಲವನ್ನು ಕಾಲಿನಿಂದ ಅಪ್ಪಳಿಸಿದನು. 'ಸಮರಸೇನಾ, ರಾಜ್ಯದ ಪರಿಸ್ಥಿತಿ ಸ್ವಲ್ಪ ಕೈಜಾರಿದ ಹಾಗೆಯೇ ಆಗಿದೆಯೆಂದಾಯಿತು. ಇದಕ್ಕೆಲ್ಲಾ ಕಾರಣ ನಮ್ಮ ಖಜಾನೆಯಿಂದ ಹರಿದ ಹಣದ ಪ್ರವಾಹ. ಇನ್ನು ಈ ಸೊಕ್ಕು ಹಿಡಿದವರ ಕುತಿಗೆಯನ್ನು ಹಿಚುಕದೆ ಸಾಧ್ಯವಿಲ್ಲ. ಉಳಿದವರಿಗೆ ತಕ್ಕ ಬುದ್ಧಿ ಬರುವ ಹಾಗೆ ಮುಖ್ಯ ನಾಯಕರನ್ನೆಲ್ಲಾ ಹಿಡಿದು ಚಿತ್ರವಧೆಮಾಡಲೇಬೇಕು. ಬೇಗನೇ ಆ ಕಾರ್ಯ ಮಾಡಿ ಒಳ್ಳೆಯ ಸಮಾಚಾರ ಬರುವಂತೆ ನೀವಿಬ್ಬರೂ ಮಾಡಿರಿ. ಈಗಲೇ ಹೊರಡಿರಿ!'

'ಸರಿ ಮಹಾರಾಜರೆ. ಮತ್ತೆ ಬಂದು ನೋಡುತ್ತೇವೆ' ಎಂದು ಸಮರಸೇನನು ರಹಸ್ಯ ಮಂದಿರದಿಂದ ಹೊರಟನು. ನಾನೂ ಅವನೊಂದಿಗೇ ಇದ್ದೆ. ನಮ್ಮಿಬ್ಬರ ಬಾಯಿಯಿಂದಲೂ ಸ್ವಲ್ಪ ಹೊತ್ತು ಯಾವ ಮಾತೂ ಹೊರಡಲಿಲ್ಲ. ಸಮರಸೇನನು ಒಂದು ಕಡೆಯಲ್ಲಿ ಥಕ್ಕನೆ ನಿಂತು, 'ಶಿವದತ್ತಾ, ಇದನ್ನು ಕುರಿತು ನಿನ್ನ ಅಭಿಪ್ರಾಯವೇನು?' ಎಂದು ಕೇಳಿದನು. ನಾನು ಇದಿರು ನೋಡದ ರೀತಿಯಲ್ಲಿ ಅವನು ಪ್ರಶ್ನಿಸಿದುದನ್ನು ನೋಡಿ ಏನು ಹೇಳಬೇಕೋ ಗೊತ್ತಾಗಲಿಲ್ಲ. ನನಗೆ ಅಲ್ಪ ಸ್ವಲ್ಪ ತಿಳಿದಿರುವಂತೆ, ದೇಶವು ಅರಾಜಕವಾಗಿರುವುದನ್ನೂ, ಬಾಯಿ ಮಲ್ಲರಾದವರು ಪ್ರಜೆಗಳನ್ನು ಒಂದುಗೂಡಿಸಿ ಅವರವರೊಳಗೆ ಹೋರಾಡುವುದನ್ನೂ ನಾನು ಅರಿತಿದ್ದೆನು. ಅಂಥವರು ಹೀಗೆ ಮಹರಾಜನನ್ನೇ ಇದಿರಿಸುವಷ್ಟು ಬಲಿಷ್ಠರಾಗುವರೆಂದು ನಾನು ಊಹಿಸಿರಲಿಲ್ಲ. ಆದುದರಿಂದ ನನಗೂ ಆಶ್ಚರ್ಯವೇ. ಆದರೆ ಒಂದು: ಸಮರಸೇನನಿಗೆ ನನಗೆ ತಿಳಿವಷ್ಟು ಕೂಡಾ ದೇಶ ಪರಿಸ್ಥಿತಿ ತಿಳಿಯದೆಂದು ಈಗ ಗೊತ್ತಾಯಿತು.

'ಶತ್ರುಗಳು ಬಲಶಾಲಿಗಳೆಂದೇ ನನಗೆ ಕಾಣುತ್ತದೆ. ಹಾಗಿಲ್ಲದಿದ್ದರೆ ಅವರು ಹೀಗೆ ಮಹಾರಾಜನಿಗೆ ಎಚ್ಚರ ಬಿಡುತ್ತಿದ್ದಿಲ್ಲ. ಮುಂದಾಗಿ ರಾಜನಿಗೆ ತಿಳಿಸಿ, ದಾಳಿ ತೆಗೆಯುತ್ತಾರೆಂದರೆ, ರಾಜನು ಯುದ್ಧ ಸನ್ನದ್ಧ

ನಾವರೂ...ಮುಂದಿನ ಮಾತು ಏನು ಭಯಂಕರವಾಗುವುದೆಂದು ನಾನೇ ಹೇಳಬೇಕೆ ? ' ಎಂದನು.

ಸಮರಸೇನನು ಒಂದೆರಡು ನಿಮಿಷ ಮಾತಾಡಲಿಲ್ಲ. ಆ ಮೇಲೆ ತಲೆಯಾಡಿಸುತ್ತ 'ಶಿವದತ್ತಾ. ನೀನು ಹೇಳಿದುದರಲ್ಲಿ ಸ್ವಲ್ಪ ಮಟ್ಟಿಗೆ ಸತ್ಯವಿದೆಯೆಂದಾಯಿತು. ಆದರೂ ಧೈರ್ಯಗೆಡಬೇಕಾಗಿಲ್ಲ. ನಮ್ಮ ಹತ್ತಿರ ಸುಶಿಕ್ಷಿತವಾದ ಸೈನ್ಯವಿದೆಯಷ್ಟೆ? ಅನುಭವಸ್ಥರೂ, ಸಮರ್ಥರೂ, ಎಲ್ಲಕ್ಕೂ ಮಿಗಿಲಾಗಿ ನಂಬುಗಸ್ಥರೂ ಆದ ನಾಯಕರೂ ಇದ್ದಾರೆ. ಈ ದೇಶ ದ್ರೋಹಿಗಳನ್ನು ಒರೆಸಿ ಹಾಕಲು ಬಹಳ ಹೊತ್ತೇನೂ ಹಿಡಿಯದು.' ಎಂದನು.

ಸಮರಸೇನನು ನಂಬುಗಸ್ಥರಾದ ನಾಯಕರೆಂದು ಯಾರನ್ನು ಸೂಚಿಸುವನೆಂದು ನನಗೆ ಗೊತ್ತಾಗದಿರಲಿಲ್ಲ. ಮಂತ್ರ ದ್ವೀಪದಲ್ಲಿ ತನ್ನೊಂದಿಗೆ ಪ್ರಾಣಕ್ಕೆ ಪ್ರಾಣ ಕೊಡುವವರಾಗಿದ್ದ ಕೆಲಮಂದಿ ಸೈನಿಕರನ್ನೂ, ಅವರೊಳಗೆ ಮುಖ್ಯನಾದ ನರವಾಹನ ಮಿಶ್ರನನ್ನೂ ಹೇಳುತ್ತಾನೆ.

'ಆದರೆ ಅಂಥವರ ಬುದ್ಧಿ ಈಗ ಹೇಗಿದೆಯೋ! ವಿನೋದದಲ್ಲಿ ಕಾಲ ಕಳೆದ ಸೈನಿಕರ ಯುದ್ಧದ ಅಭ್ಯಾಸಗಳು ತುಕ್ಕು ಹಿಡಿದಿದ್ದರೆ ಏನಾದೀತು!' ಎಂದು ನನ್ನ ಮನಸ್ಸಿನಲ್ಲಿ ಕುರುಕುರು ಮಾಡುತಿತ್ತು. ಆದರೂ ಬಾಯಿ ತೆರೆದು ಅದನ್ನು ಹೇಳಲಿಲ್ಲ. ಅವನ ಮಾತನ್ನು ಬಲಬಡಿಸುವವನಂತೆ. 'ನಿಜ ನಿಜ. ಈ ಸ್ವಲ್ಪ ಕೆಲಸಕ್ಕೆ ನೀನಾಗಲೀ ನಾನಾಗಲೀ ಸ್ವತಃ ನಾಯಕತ್ವ ವಹಿಸುವುದು ಹಾಸ್ಯಾಸ್ಪದವೂ ಆದೀತು. ನಾವು ಹಿಂದಿದ್ದು ಆಜ್ಞೆ ಮಾಡಿದರೇ ಸಾಕು. ಮುಖ್ಯವಾಗಿ ಈ ದ್ರೋಹಿಗಳ ಗುಂಪನ್ನು ಎಷ್ಟು ಬೇಗನೆ ನಾಶಪಡಿಸುವುದು ಸಾಧ್ಯವೋ ಅಷ್ಟು ಬೇಗ ನಾಶಪಡಿಸುವುದು ಒಳ್ಳೆಯದು.' ಎಂದೆನು.

'ಹೌದು. ನಿಜವೇ. ಹಿಂದಿದ್ದೇ ಕಾರ್ಯ ಸಾಧಿಸೋಣ. ನಂಬುಗಸ್ಥನೂ, ಧೈರ್ಯಶಾಲಿಯೂ ಆದ ನರವಾಹನ ಮಿಶ್ರನಿಗೇ ಈ ಕಾರ್ಯವನ್ನು ಒಪ್ಪಿಸಬೇಕೆಂದಿದ್ದೇನೆ' ಎಂದನು ಸಮರಸೇನ.

ನನಗೆ ಜುಪ್ಪೆಂದಿತು. ನರವಾಹನಮಿಶ್ರನನ್ನು ಕುರಿತು ನಾನು ಆಗಲೇ ಕೆಲವು ವಿಷಯ ತಿಳಿದಿದ್ದೆನು. ನನಗೆ ಬಹಳ ದಿನಗಳಿಂದ ಅವನ ಪ್ರವರ್ತನೆ ಅನುಮಾನಾಸ್ಪದವಾಗಿ ಕಾಣುತ್ತಿತ್ತು. ಆದರೆ ಆ ಸಂಗತಿಯನ್ನು ಸಮರಸೇನನೊಂದಿಗೆ ಈ ಇಕ್ಕಟ್ಟಿನ ಪರಿಸ್ಥಿತಿಯಲ್ಲಿ ಹೇಳುವುದು ಒಳ್ಳೆಯದಲ್ಲವೆನಿಸಿತು. ಆದರೂ ನಾಯಕತ್ವವು ನರವಾಹನ ಮಿಶ್ರನಿಗೆ ಒಪ್ಪಿಸುವುದು ಕೇಡು ತಂದುಕೊಂಡ ಹಾಗೇ ಎಂದು ನನ್ನ ಮನಸ್ಸು ಒತ್ತಿ ಹೇಳುತ್ತಿತ್ತು. ಈಗೇನು ಮಾಡಲಿ? ತೀವ್ರವಾಗಿ ಹೊಡೆದುಕೊಳ್ಳ ತೊಡಗಿತು ನನ್ನ ಹೃದಯ.

—(ಇನ್ನೂ ಇದೆ)





# ರಾಜನ ಮನಸ್ಸು

ತನ್ನ ಹೆಗಲ ಮೇಲಿನ ಭಾರವು ಹಾರಿಹೋದ ಕೂಡಲೇ ತ್ರಿವಿಕ್ರಮ ಮಹಾರಾಜನು, ಮರದ ಬಳಿಗೆ ಹಿಂದಿರುಗಿ ಹೋಗಿ, ಕೊಂಬೆಯಲ್ಲಿ ನೇತಾಡುವ ಶವವನ್ನು ಕೆಳಗಿಳಿಸಿ ತನ್ನ ಹೆಗಲ ಮೇಲೆ ಏರಿಸಿ ಕೊಂಡು, ಮತ್ತೆ ಸ್ಮಶಾನದ ಕಡೆಗೆ ನಡೆಯ ಲಾರಂಭಿಸಿದನು. ಆಗ ಶವದೊಳಗೆ ಹುದುಗಿದ್ದ ಬೇತಾಳವು ತುಸುನಕ್ಕು ಮಾತಾಡಲು ತೊಡಗಿತು : "ಎಲೈ ಮಹಾರಾಜನೇ, ನಿನ್ನನ್ನು ನೋಡಿದರೆ ನನಗೆ ನಗೆಯೇ ಬರುತ್ತದೆ. ನೀನೊಬ್ಬ ಮಹಾರಾಜ ತಾನೇ ? ರಾಜರ ಚಿತ್ತವೃತ್ತಿ ಪ್ರವಾಹದ ವೇಗದಂತೆ ತಿಳಿಯಲು ಸಾಧ್ಯವಿಲ್ಲವೆಂದು ಹೇಳುತ್ತಾರೆ. ಹಾಗೆ ನಿನ್ನ ಕೆಲಸದ ರಹಸ್ಯವೂ ಗೊತ್ತಾಗುವುದಿಲ್ಲ. ನಿನ್ನ ರೀತಿ ನೋಡುವಾಗ, ಬಹಲ ಕಾಲದಿಂದ ಭಕ್ತಿ ಗೌರವ ವಿಶ್ವಾಸಗಳನ್ನಿಟ್ಟು ಸೇವೆ ಮಾಡುತ್ತಿದ್ದ ತನ್ನ ಮಂತ್ರಿಗಳಿಗೆ ಕೂಡಾ ಅರ್ಥವಾಗದ ಚತುರ ಸೇನನ ಕಥೆ ನನ್ನ ನೆನಪಿಗೆ ಬತುತ್ತದೆ. ನಿನಗೆ ನನ್ನ ಭಾರದ ಕಷ್ಟ ಗೊತ್ತಾಗದ ಹಾಗೆ ಆ ಕಥೆಯನ್ನು ಹೇಳುತ್ತೇನೆ ಕೇಳು" ಎಂದು ಕಥೆಯನ್ನು ಪ್ರಾರಂಭಿಸಿತು :

ಬೇತಾಳ ಕಥೆಗಳು?...



ಗಿರಿಕೂಟವೆಂಬ ರಾಜ್ಯವನ್ನು ಪಾಲಿಸುತ್ತಿದ್ದ ಚತುರಸೇನ ಮಹಾರಾಜನ ಮಂತ್ರಿಗಳಲ್ಲಿ ಒಬ್ಬನ ಹೆಸರು ಲೋಕನಾಥನೆಂದು. ಅವನಿಗೆ ಅವನ ಹೆಂಡತಿಯ ಬಂಧುಗಳಿಬ್ಬರು ತುಂಬ ಸಮೀಪ ವರ್ತಿಗಳಾಗಿದ್ದರು, ರಾಜನ ಆಸ್ಥಾನದಲ್ಲಿ ಉದ್ಯೋಗ ಪಡೆಯಬೇಕೆಂದು ಅವರ ಪ್ರಯತ್ನವಾಗಿತ್ತು. ಅವರನ್ನು ಕುರಿತು ರಾಜನೊಂದಿಗೆ ಹೇಳಬೇಕೆಂದು ಲೋಕನಾಥನ ಹೆಂಡತಿ ಗಂಡನೊಡನೆ ಆಗಾಗ ಹೇಳಿಕೊಂಡೇ ಇದ್ದಳು.

ಲೋಕನಾಥನು ಅದಕ್ಕೆ ಪ್ರಯತ್ನಿಸದೆ ಸುಮ್ಮನಿರಲಿಲ್ಲ. ಅವರನ್ನು ಆಸ್ಥಾನದಲ್ಲಿ ಸೇರಿಸುವುದು ಹೇಗೆಂದು ಯೋಚಿಸಿಕೊಂಡೇ ಇದ್ದನು. ಹೆಂಡತಿಗೆ ಹತ್ತಿರದವರಾದ ಅವರಿಬ್ಬರಲ್ಲಿ ಒಬ್ಬನು ಒಳ್ಳೆಯ ಕವಿತಾ ಪಾಂಡಿತ್ಯವುಳ್ಳವನು. ಇನ್ನೊಬ್ಬನು ಸಮರ್ಥನಾದ ಜೋಯಿಸ, ಇವರಿಬ್ಬರನ್ನು ದೃಷ್ಟಿಯಲ್ಲಿಟ್ಟುಕೊಂಡು ಲೋಕನಾಥನು ರಾಜನೊಂದಿಗೆ ಸೂಚನೆ ಕೊಡುವವನಂತೆ, "ಪ್ರಭುಗಳೇ, ನಮ್ಮ ಆಸ್ಥಾನದಲ್ಲಿ ಒಳ್ಳೆಯ ಕವಿಗಳೂ, ಜ್ಯೋತಿಷಿಗಳೂ, ಇದ್ದರೆ ಇನ್ನಷ್ಟು ಕಳೆಕಟ್ಟಿ ಶೋಭಿಸಬಹುದು." ಎಂದು ಒಂದೆರಡುಸಾರಿ ಹೇಳಿದ್ದನು.

ಆಗ ರಾಜನು, "ಅದಕ್ಕೆ ಅವಸರವೇನಿಲ್ಲ. ಪ್ರಸ್ತುತಕ್ಕೆ ನಮ್ಮದು ಬಡದೇಶವೇ. ದೇಶದೊಳಗೆಲ್ಲಾ ಪ್ರಜೆಗಳಿಗೆ ಸುಖವೂ ಸಂತೋಷವೂ ಗಟ್ಟಿಯಾದ ಮೇಲೆ ಕಲಾಪೋಷಣೆಗಳನ್ನು ಕುರಿತು ಆಲೋಚಿಸಬಹುದು." ಎಂದು ಹೇಳಿಬಿಟ್ಟಿದ್ದನು.

ಲೋಕನಾಥನು ತನ್ನ ಪ್ರಶ್ನೆಯನ್ನು ಕುರಿತು ಮತ್ತೊಬ್ಬ ಮಂತ್ರಿಯೊಂದಿಗೂ ಹೇಳಿದ್ದನು. ಅದಕ್ಕೆ ಆ ಮಂತ್ರಿ "ರಾಜರ ಮನಸ್ಸಿನ ಹೊಯಿಲು ಬಹಳ ವಿಚಿತ್ರವಾದುದು. ನಿನ್ನ ಆ ಬಂಧುಗಳು ತಮ್ಮ ಪ್ರತಿಭೆಯನ್ನು ರಾಜನ ಮುಂದೆ ಪ್ರದರ್ಶಿಸಲಿ. ಆಗ ರಾಜನ ಮನಸ್ಸು ತಿರುಗಬಹುದು" ಎಂದನು.

ಅದೇ ಒಳ್ಳೆಯ ಉಪಾಯವೆಂದು ಲೋಕನಾಥನಿಗೆ ತೋರಿತು. ಒಂದು ದಿನ ರಾಜನು ಲೋಕನಾಥನೊಂದಿಗೆ ಕೂಡಿ ವೇಷ ಬದಲಾಯಿಸಿಕೊಂಡು ಸಮೀಪದ ಒಂದು ನಗರಕ್ಕೆ ಹೋಗಿ, ಅಲ್ಲಿಯ ಸ್ಥಿತಿಗತಿಗಳನ್ನು ನೋಡಬೇಕೆಂದು ಅಂದುಕೊಂಡನು. ಈ ಸಂಗತಿಯನ್ನು ಎರಡು ದಿನಗಳ ಮೊದಲೇ ಲೋಕನಾಥನೊಂದಿಗೆ ಹೇಳಿದ್ದನು. ಇಂತಹ ನಗರದಲ್ಲಿ ಇಂತಹ ದಿನ ರಾಜನಿರುವ ಸಂಗತಿಯನ್ನು ಲೋಕನಾಥನು ತನ್ನ ಆ ಬಂಧುಗಳೊಂದಿಗೆ ತಿಳಿಸಿ, ಆ ದಿನ ಅಲ್ಲಿ ಅವರು ತಮ್ಮ ವಿದ್ಯೆಗಳನ್ನು ಪ್ರದರ್ಶಿಸಬೇಕೆಂದು ಹೇಳಿಟ್ಟನು.

ಆದರೆ ತೀರಾ ಪ್ರಯಾಣ ಹೊರಡುವ ದಿನ ರಾಜನು, ತಾನು ಮೊದಲು ಅಂದುಕೊಂಡ ನಗರಕ್ಕೆ ಹೋಗುವುದನ್ನು ಬಿಟ್ಟು, ಮತ್ತೊಂದು ನಗರಕ್ಕೆ ಹೊರಟನು. ಅವನೊಂದಿಗಿದ್ದ ಲೋಕನಾಥನು ಗಾಬರಿಯಾಗಿ, "ಪ್ರಭೂ, ನಾವು ಅಂದುಕೊಂಡದ್ದು



ಈ ನಗರಕ್ಕೆ ಹೋಗುವುದು ಅಲ್ಲವಷ್ಟೆ ?" ಎಂದನು. ಆ ಮಾತಿಗೆ ಚತುರಸೇನ ರಾಜನು ನಕ್ಕು, "ಕಡೆಯ ಕ್ಷಣದ ವರೆಗೂ ನನ್ನ ಕಾರ್ಯಕ್ರಮವು ಹೀಗೆಯೇ ಎಂದು ಯಾರಿಗೂ ನಿಜ ತಿಳಿಯಬಾರದು, ಅದು ನನ್ನ ಪದ್ಧತಿ." ಎಂದನು.

ಇದರಿಂದ ಕೈ ಸುಟ್ಟುಕೊಂಡವನಂತೆ ತಳ ಮಳಿಸುವ ಲೋಕನಾಥನು, ಈ ಸಂಗತಿಯನ್ನು ಒಬ್ಬ ನಂಬಿಗಸ್ಥನ ಮೂಲಕ ಮನೆಗೆ ಹೇಳಿ ಕಳು ಹಿಸಿದನು. ಆದರೆ ಆ ನಂಬಿಗಸ್ಥನು ಮನೆ ಮುಟ್ಟುವು ದಕ್ಕೆ ಮೊದಲೇ ಬಂಧುಗಳಿಬ್ಬರೂ ಮನೆಯಿಂದ ಗುರುತಿಸಲ್ಪಟ್ಟಲ್ಲಿಗೆ ಹೋಗಿಯಾಗಿತ್ತು.

ಲೋಕನಾಥನು ದಿಗಿಲುಗೊಂಡ ಮನಸ್ಸಿನಿಂದಲೇ ರಾಜನೊಂದಿಗೆ ನಡೆಯುತ್ತಿದ್ದನು. ಅವರು ಹೋದ ನಗರದಲ್ಲಿ ಒಬ್ಬ ಬಡ ಬ್ರಾಹ್ಮಣನನ್ನು ಮಾತಾಡಿ ಸಿದರು. ಇವರು ಯಾರೋ ಪ್ರಯಾಣಿಕರೆಂದು ಕೊಂಡು ಬ್ರಾಹ್ಮಣನು ಅವರಿಬ್ಬರಿಗೂ ಆತಿಥ್ಯ ವಿತ್ತನು. ಅಲ್ಲಿ ಮಾತಾಡುತ್ತ ರಾಜನು ಪರಿಪಾಲನೆ ಯನ್ನು ಕುರಿತು ಅನೇಕ ವಿಶೇಷಗಳನ್ನು ತಿಳಿದು ಕೊಂಡನು. ದಿನವಿಡೀ ರಾಜನೂ ಲೋಕನಾಥನೂ ನಗರದೊಳಗೆಲ್ಲಾ ತಿರುಗಾಡಿ ರಾಜನನ್ನು ಕುರಿತು ಪ್ರಜೆಗಳು ಏನು ಹೇಳಿಕೊಳ್ಳುತ್ತಿರುವರೆಂದು ತಿಳಿದು ಕೊಳ್ಳುತ್ತಿದ್ದರು. ಹೀಗೆಯೇ ಆ ನಗರದಲ್ಲಿ ಎರಡು ದಿನಗಳು ಬ್ರಾಹ್ಮಣನ ಮನೆಯಲ್ಲೇ ತಂಗಿ ಕಳೆದರು. ಮೂರನೇ ದಿನ ಅವರಿಬ್ಬರೂ ನಗರದಲ್ಲಿ ತಿರುಗಿ ಬ್ರಾಹ್ಮಣನ ಮನೆಗೆ ಬಂದಾಗ, ಬ್ರಾಹ್ಮಣನು ಯಾರಿಗೋ ಕೈ ನೋಡಿ ಜ್ಯೋತಿಷ ಹೇಳುತ್ತಿದ್ದನು.

"ನಿಮಗೆ ಜ್ಯೋತಿಷ ಗೊತ್ತೆ ?" ಎಂದು ರಾಜನು ಆಶ್ಚರ್ಯದಿಂದ ಬ್ರಾಹ್ಮಣನನ್ನು ಕೇಳಿದನು. "ಹಸ್ತಸಾಮುದ್ರಿಕ ಗೊತ್ತು. ಕೈ ನೋಡಿ ಯಾರಿಗಾದರೂ ಭೂತ ಭವಿಷ್ಯ ವರ್ತಮಾನಗಳನ್ನು ಹೇಳುತ್ತೇನೆ" ಎಂದನು ಬ್ರಾಹ್ಮಣ.

"ಹಾಗದರೆ ನನ್ನ ಕೈ ನೋಡಿ ಹೇಳುವಿರಾ ?" ಎಂದು ರಾಜನು ಅಂಗೈಯನ್ನು ಮುಂದೆ ಮಾಡಿದನು.

ಬ್ರಾಹ್ಮಣನು ರಾಜನ ಕೈಯನ್ನು ಪರೀಕ್ಷಿಸಿ ನೋಡಿ, "ನೀವು ಭಾಗ್ಯವಂತರಾಗಿರುವಿರಿ. ಆದರೆ ನಿಮಗೆ ಶಕ್ತಿಗೆ ಮೀರಿದ ಆಶೆಗಳಿವೆ. ಎಂದಿಗಾದರೂ ರಾಜನಾಗಬೇಕೆಂದೂ, ಅಧಿಕಾರ ನಡೆಸಬೇಕೆಂದೂ ಆಶಿಸುವಿರಿ. ಆದರೆ ನಿಮ್ಮಿಂದ ರಾಜನಾಗಲು ಸಾಧ್ಯ ವಿಲ್ಲ. ಇರುವಷ್ಟರಲ್ಲಿ ತೃಪ್ತಿಯಾಗಿದ್ದರೆ ನಿಮ್ಮಂಥ ಅದೃಷ್ಟಶಾಲಿಗಳು ಬೇರೊಬ್ಬರಿಲ್ಲ" ಎಂದನು.

ರಾಜನು ಬ್ರಾಹ್ಮಣನ ಮಾತಿಗೆ ಮೆಚ್ಚಿಗೆ ವ್ಯಕ್ತ ಪಡಿಸಿ, "ನನ್ನನ್ನು ಕುರಿತು ಇನ್ನೂ ಏನಾದರೂ ವಿಶೇಷವಿದ್ದರೆ ಹೇಳಿರಿ" ಎಂದನು.

ಜ್ಯೋತಿಷ ಬ್ರಾಹ್ಮಣನು ಹಸ್ತರೇಖೆಗಳನ್ನು ನೋಡುತ್ತಾ, ಬಹಳ ಹೊತ್ತಿನವರೆಗೆ ತಪ್ಪುಗಳನ್ನೇ ಹೇಳಿದನು. ಆದರೂ ಬಿಡದೆ ರಾಜನು ಪ್ರಶ್ನೆಗಳನ್ನು ಮಾಡಿ ಬಹಳ ಹೊತ್ತಿನವರೆಗೆ ಜ್ಯೋತಿಷದ



ಮೋಜಿನಲ್ಲಿ ಕಳೆದನು. ಕಡೆಗೆ ರಾಜನು ಅವನೊಂದಿಗೆ, "ಚೆನ್ನಾಗೇ ಹೇಳುವಿರಿ. ಈ ವಿದ್ಯೆ ನಿಮಗೆ ಹೇಗೆ ಬಂತು ?" ಎಂದು ಪ್ರಶ್ನಿಸಿದನು.

"ಹಾಗೆ ನೋಡಿದರೆ ಸ್ವಂತದಲ್ಲಿ ನಾನೊಬ್ಬ ಹುಟ್ಟುಕವಿ. ನನ್ನ ಮನೆಯಲ್ಲಿ ನಮ್ಮ ಪೂರ್ವಿಕರು ಬಿಟ್ಟು ಹೋದ ಎಷ್ಟೋ ಗ್ರಂಥಗಳಿವೆ. ಅದನ್ನು ನೋಡಿಕೊಂಡಿರುವಾಗ ಹಸ್ತ ಸಾಮುದ್ರಿಕ ಗ್ರಂಥ ವೊಂದಿದ್ದಿತು. ಆಗಿನಿಂದ ಜೋತಿಷ ಹೇಳಲು ಪ್ರಾರಂಭ ಮಾಡಿದ್ದೇನೆ" ಎಂದನು ಬ್ರಾಹ್ಮಣ.

"ನೀವು ಕವಿಗಳೂ ಹೌದೇನು ? ಎಲ್ಲಿ, ಒಂದು ಕವಿತ್ವ ಹೇಳಿರಿ ನೋಡೋಣ," ಎಂದನು ರಾಜ.

ಬ್ರಾಹ್ಮಣನು ತಾನು ಬರೆದ ಕೆಲವು ಪದ್ಯಗಳನ್ನು ಓದಿದನು. ಅದರಲ್ಲಿ ಎಷ್ಟೋ ತಪ್ಪುಗಳಿದ್ದುವೆಂದು, ಸಾಹಿತ್ಯದಲ್ಲಿ ಅಷ್ಟೇನೂ ಪರಿಚಯವಿಲ್ಲದ ಲೋಕ ನಾಥನಿಗೆ ಗೊತ್ತಾಯಿತು. ಆದರೆ ರಾಜನು ಮಾತ್ರ ಆ ಕವಿತೆಗಳನ್ನು ತುಂಬಾ ಮೆಚ್ಚಿಕೊಂಡನು.

ಅವರು ನಗರದಲ್ಲಿ ಮತ್ತೆರಡು ದಿನಗಳವರೆಗೆ ಇದ್ದರು. ಆ ಎರಡು ದಿನಗಳಲ್ಲಿ ಚತುರಸೇನ ರಾಜನು ಸಮಯ ದೊರಕಿದಾಗ ಬ್ರಾಹ್ಮಣನ ಕವಿತೆಗಳನ್ನು ಕೇಳುತ್ತಾ ಕಾಲಕಳೆದನು. ಅಲ್ಲಿಂದ ಹೊರಟು ಹೋಗುವ ಸಮಯಕ್ಕೆ ರಾಜನು ಬ್ರಾಹ್ಮಣನಿಗೆ ನೂರು ಚಿನ್ನದ ನಾಣ್ಯಗಳನ್ನು ಬಹುಮಾನವಾಗಿ ಕೊಟ್ಟು, "ನೀವು ನಿಮ್ಮ ವಿದ್ಯೆ ಗಳಲ್ಲಿ ಇನ್ನಿಷ್ಟು ಪ್ರಯತ್ನಪಟ್ಟರೆ ಇನ್ನೂ ದೊಡ್ಡ ಕವಿಯೂ, ಜ್ಯೋತಿಷ್ಕರೂ ಆಗುವಿರಿ" ಎಂದನು.

ಇಷ್ಟರೊಳಗೆ ಲೋಕನಾಥನ ಬಂಧುಗಳಿಗೆ ಅವನ ಹೆಂಡತಿಯ ಮೂಲಕ, ರಾಜನು ಹೋಗಿರುವ ಸ್ಥಳವು ಗೊತ್ತಾದುದರಿಂದ ಅಲ್ಲಿಗೆ ಹೊರಟು ಬರುತ್ತಿದ್ದರು. ರಾಜಧಾನಿಗೆ ಹಿಂದಿರುಗಿಕೊಂಡಿದ್ದ ರಾಜನೂ ಲೋಕನಾಥನೂ ದಾರಿಯಲ್ಲೇ ಅವರ ಕಣ್ಣಿಗೆ ಬಿದ್ದರು. ಲೋಕನಾಥನು ಯಾವ ಮಾರು ವೇಷದಲ್ಲಿರುವನೆಂದು ಅವರಿಗೆ ಗೊತ್ತಿರುವುದರಿಂದ, ಅವನ ಜತೆಯಲ್ಲಿರುವವನು ರಾಜನೇ ಎಂತಲೂ ಅವರಿಗೆ ಗೊತ್ತಾಯಿತು.

ಅಂತಲೇ ಜ್ಯೋತಿಷ್ಯ ಬಲ್ಲವನು ಚತುರಸೇನ ರಾಜನನ್ನು ನೋಡಿ ತನ್ನ ಜತೆಯಲ್ಲಿರುವ ಕವಿ ಯೊಂದಿಗೆ, "ನೋಡಿದೆಯಾ ಅವರನ್ನು ! ನಾನು ಮುಖ ನೋಡಿದ ಕೂಡಲೇ ಮನುಷ್ಯನ ಮೂರು ತಲೆ ಮಾರಿನವರನ್ನೂ ಹೇಳಬಲ್ಲೆನು. ಈ ಮಹಾ ಮನುಷ್ಯ ವೇಷ ಬದಲಾಯಿಸಿಕೊಂಡಿರುವ ಯಾವ ಮಹಾರಾಜನೋ ಆಗಿರಬೇಕು !" ಎಂದನು.

ಆ ಕೂಡಲೇ ಕವಿ, "ಹಾಗಿದ್ದರೆ ಆ ಮಹಾ ರಾಜನ ಗುಣಗಳನ್ನು ಕೀರ್ತಿಸುತ್ತ ನಾನು ಕವಿತ್ವ ಕಟ್ಟಿ ಹಾಡುತ್ತೇನೆ !" ಎಂದು ಕೂಡಲೇ ಒಂದು ಪದ್ಯವನ್ನೂ ಹೇಳ ತೊಡಗಿದನು.

ಅವರು ಹೇಳಿದುದೆಲ್ಲ ರಾಜನಿಗೂ, ಲೋಕನಾಥ ನಿಗೂ ಕೇಳಿಸಿತ್ತು. ಅವರು ತನ್ನ ಹೆಂಡತಿಯ

ಬಂಧುಗಳೆಂದು ತಿಳಿದ ಲೋಕನಾಥನು ರಾಜನೊಂದಿಗೆ, "ಪ್ರಭೂ, ಇವರು ಅಸಾಧಾರಣ ಪಂಡಿತರಾಗಿರುವಂತಿದೆ. ತಮ್ಮ ಆಸ್ಥಾನಕ್ಕೆ ಕರೆಯಿಸಿಕೊಂಡರೆ ಚೆನ್ನಾಗಿದ್ದೀತು!" ಎಂದನು.

"ಹೌದೌದು! ಇವರು ದೊಡ್ಡ ಪಂಡಿತರೆನ್ನಲು ಸಂದೇಹವೇನಿಲ್ಲ, ಬಿಡು!" ಎಂದು ರಾಜನು ಬೇಸರದಿಂದ ಹೇಳಿ ತನ್ನ ಪಾಡಿಗೆ ಮುಂದೆ ನಡೆದನು.

ಬೇತಾಳವು ಇಲ್ಲಿಗೆ ಕಥೆಯನ್ನು ಮುಗಿಸಿ, "ರಾಜಾ, ಚತುರಸೇನನ ಪ್ರವರ್ತನೆ ತುಂಬಾ ಅಸಂದರ್ಭವಾಗಿಲ್ಲವೇನು? ನಗರದಲ್ಲಿ ಆ ಅರ್ಧ ಪಂಡಿತ ಬ್ರಾಹ್ಮಣನ ಕವಿತ್ವಕ್ಕೂ, ಜ್ಯೋತಿಷ್ಯಕ್ಕೂ ಮೆಚ್ಚಿಕೊಂಡುದು ಮಾತ್ರವಲ್ಲದೆ, ಅವನಿಗೆ ನೂರು ಚಿನ್ನದ ನಾಣ್ಯಗಳನ್ನು ಬಹುಮಾನ ಕೂಡಾ ಕೊಟ್ಟಿದ್ದಾನೆ. ಅಂತಹ ರಾಜನು ನಿಜವಾದ ಪಾಂಡಿತ್ಯವನ್ನು ಪ್ರದರ್ಶಿಸಿದವರನ್ನು ತಿರಸ್ಕರಿಸಿದನೇಕೆ? ಅವರು ತನ್ನ ಮಂತ್ರಿಯ ಕಡೆಯ ಬಂಧುಗಳೆಂದೂ, ಎಲ್ಲವನ್ನು ಮುಂದಾಗಿ ತಿಳಿದೇ ಬಂದವರೆಂದೂ ರಾಜನಿಗೆ ಗೊತ್ತಾಯಿತೇ? ಈ ಸಂದೇಹಕ್ಕೆ ಸರಿಯಾದ ಉತ್ತರ ತಿಳಿದೂ ಹೇಳದೆ ಹೋದರೆ ನಿನ್ನ ತಲೆ ಸಿಡಿದು ಹೋಗುತ್ತದೆ!" ಎಂದಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ನಡುದಾರಿಯಲ್ಲಿ ಸಿಕ್ಕಿದವರು ಮಂತ್ರಿ ಲೋಕನಾಥನ ಬಂಧುಗಳೆಂದು ರಾಜನಿಗೆ ತಿಳಿಯುವ ಸಾಧ್ಯತೆ ಇರಲಿಲ್ಲ. ಮಂತ್ರಿ ಹೇಳಿದ ಮಾತಿನಿಂದ ಅವರು ನಿಜವಾದ ಪಂಡಿತರೆಂತಲೂ ಅವನಿಗೆ ತೋರಿದೆ. ಆದರೆ ಕಲಾಪೋಷಣೆಯನ್ನು ಕುರಿತು ತನಗಿರುವ ಅಭಿಪ್ರಾಯವೇನೆಂಬುದನ್ನು ಅವನು ಈವೊದಲೇ ಮಂತ್ರಿಯೊಂದಿಗೆ ಹೇಳಿದ್ದಾನೆ. ತನ್ನದು ಬಡತನದ ದೇಶವಾದುದರಿಂದ ಮೊದಲು ಪ್ರಜೆಗಳ ಸುಖಶಾಂತಿಗಳನ್ನು ನೋಡಿಕೊಂಡ ಮೇಲೆಯೇ ಆಸ್ಥಾನದ ಅಲಂಕಾರ ವಿಷಯವೆಂಬುದರಲ್ಲಿ ರಾಜನ ಮನಸ್ಸು ದೃಢವಾಗಿದ್ದಿತು. ರಾಜನು ಬಿಡಾರ ಮಾಡಿದ ಮನೆಯ ಬ್ರಾಹ್ಮಣನ ಕವಿತ್ವವನ್ನೂ, ಜ್ಯೋತಿಷವನ್ನೂ ಕುರಿತು, ಆ ಬ್ರಾಹ್ಮಣನಿಗೆ ಅವೆರಡರಲ್ಲಿಯೂ ಪಾಂಡಿತ್ಯವೇನಿಲ್ಲವೆಂದು ಯಾರಿಗಾದರೂ ಗೊತ್ತಾಗುತ್ತಿತ್ತು. ಆದರೆ ರಾಜನು ಅವನನ್ನು ಮೆಚ್ಚಿದ ಕಾರಣವೇನೆಂದರೆ, ನಗರದಲ್ಲಿ ಅವನಿಗೆ ಆ ಬ್ರಾಹ್ಮಣನ ಮನೆಯಲ್ಲಿ ವಿನೋದವಾಗಿ ಕಾಲಕ್ಷೇಪ ನಡೆದಿದೆ. ಬ್ರಾಹ್ಮಣನೂ ಆದರ ಗುಣದವನು. ಅಭಿರುಚಿ ಯಿದ್ದುದನ್ನು ಬಿಡದೆ ಅಭ್ಯಾಸ ಮಾಡಲು ಪ್ರೋತ್ಸಾಹಿಸುವಂತೆ ಬಹುಮಾನ ಕೊಟ್ಟಿದ್ದಾನೆ."

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವಸಮೇತ ಹಾರಿ ಹೋಗಿ ಮರದ ಕೊಂಬೆಗೆ ನೇತು ಹಾಕಿಕೊಂಡಿತು.



# ಎಷ್ಟು ಧೈರ್ಯ ಬೇಕು!

**ಒಂ**ದು ಹಳ್ಳಿಯಲ್ಲಿ ನಾರ್ಣಪ್ಪ, ಸಿದ್ದಪ್ಪ ಎಂಬ ಇಬ್ಬರು ಬಡವರಾದ ರೈತರಿದ್ದರು.

ಒಂದು ದಿನ ಸಿದ್ದಪ್ಪ ಸಂತೆಗೆ ಹೋಗುವಾಗ ನಾರ್ಣಪ್ಪ ಅವನನ್ನು ನೋಡಿ, "ಸಂತೆಯಲ್ಲಿ ಏನು ಕೊಂಡುಕೊಳ್ಳುತ್ತೀ ?" ಎಂದು ಕೇಳಿದನು.

"ದನವನ್ನು ಕೊಂಡುಕೊಳ್ಳುತ್ತೇನೆ" ಎಂದ ಸಿದ್ದಪ್ಪ.

"ಹಾಗಾದರೆ ನಮಗಿಬ್ಬರಿಗೂ ಶ್ರಮ ತಪ್ಪಿತು. ನಾನು ನನ್ನ ದನವನ್ನು ಮಾರಲು ಸಂತೆಗೆ ಒಯ್ಯ ಬೇಕೆಂದಿದ್ದೆ. ಬಂದು ನೋಡು" ಎಂದ ನಾರ್ಣಪ್ಪ.

ಸಿದ್ದಪ್ಪ ಹೋಗಿ ನಾರ್ಣಪ್ಪನ ದನವನ್ನು ನೋಡಿ, ಬೆಲೆ ಮಾತಾಡಿ, ಮುನ್ನೂರು ರೂಪಾಯಿ ಕೊಟ್ಟು ತೆಗೆದುಕೊಂಡು ಆ ದನವನ್ನು ತನ್ನ ಮನೆಗೆ ತಂದು ಕಟ್ಟಿದನು.

ಏನೋ ರೋಗದಲ್ಲಿದ್ದ ಆ ದನ ರಾತ್ರಿಯಲ್ಲಿ ಬಿದ್ದು ಹೊರಳಾಡಿ ಬೆಳಗಾಗುವಾಗ ಸತ್ತಿತು.

ಸಿದ್ದಪ್ಪ ಆ ಸಂಗತಿಯನ್ನು ನಾರ್ಣಪ್ಪನ ಹತ್ತಿರ ಹೇಳಿ, ತನ್ನ ಹಣವನ್ನು ವಾಪಾಸು ಕೊಡಬೇಕೆಂದನು.

ನಾರ್ಣಪ್ಪ ಅದಕ್ಕೆ ಒಪ್ಪಲಿಲ್ಲ. ಇಬ್ಬರೊಳಗೆ ವಾದ ವಿವಾದವೆದ್ದಿತು. ಕಡೆಗೆ ಸಿದ್ದಪ್ಪ ಅವನನ್ನು ಗ್ರಾಮಾಧಿಕಾರಿಯ ಬಳಿಗೆ ಕರೆದುಕೊಂಡು ಹೋದನು.

"ನಾರ್ಣಪ್ಪಾ, ಆ ದನ ಹಾಗೆ ಅಕಸ್ಮಾತ್ತಾಗಿ ಸತ್ತಿತೆಂದರೆ ಅದಕ್ಕೆ ಮೊದಲೇ ಗುಣವಾಗದಂಥ ರೋಗವಿತ್ತೆಂದಾಯಿತು. ನೀನು ನಿನ್ನ ಹಾಗಿನವನನ್ನು ಹೀಗೆ ಗೊತ್ತಿದ್ದೂ ಮೋಸಮಾಡುವುದು ಕ್ಷಮಿಸತಕ್ಕುದಲ್ಲ. ಆ ಮುನ್ನೂರು ರೂಪಾಯಿಯನ್ನು ಸಿದ್ದಪ್ಪನಿಗೆ ಕೊಟ್ಟುಬಿಡು" ಎಂದನು ಗ್ರಾಮಾಧಿಕಾರಿ.

ನಾರ್ಣಪ್ಪ ಆ ಮಾತಿಗೆ ಒಪ್ಪಲಿಲ್ಲ. ಗ್ರಾಮಾಧಿಕಾರಿ ಕ್ಷಣಕಾಲ ಆಲೋಚಿಸಿ, "ಒಂದು ವೇಳೆ ನಾನೇ ಆ ದನವನ್ನು ಕೊಂಡು ಕೊಂಡು ಮನೆಗೆ ತಂದ ಮೇಲೆ ಹೀಗೆ ನಷ್ಟಪಟ್ಟಿದ್ದರೆ ನೀನು ಏನು ಮಾಡುತ್ತಿದ್ದೆ ?" ಎಂದು ಕೇಳಿದನು.

"ಅಯ್ಯಯ್ಯೋ! ಗ್ರಾಮಾಧಿಕಾರಿಗಳಾದ ನಿಮಗೆ ಆ ದನ ಮಾರಬೇಕಾದರೆ ನನಗೆಷ್ಟು ಧೈರ್ಯ ಬೇಕು!" ಎಂದನು ನಾರ್ಣಪ್ಪ.

ಮೋಸ ಹೊರಬಿತ್ತು. ಸಿದ್ದಪ್ಪನಿಗೆ ಮುನ್ನೂರರೊಂದಿಗೆ, ಜುಲ್ಮಾನೆಯ ಮೂಲಕ ಮತ್ತೊಂದು ನೂರನ್ನು ಸೇರಿಸಿ ಬೇರೆಯೇ ಕೊಡಬೇಕಾಯಿತು ನಾರ್ಣಪ್ಪ.





# ಮೂವರು ಚಿತ್ರಕಾರರು

ಅನೇಕ ವರ್ಷಗಳ ಹಿಂದೆ ಮಲಯ ರಾಜ್ಯವನ್ನು ಪಾಲಿಸಿಕೊಂಡಿದ್ದ ಕೇತುವರ್ಮನು, ತನ್ನ ಕುಮಾರನಾದ ಜಯವರ್ಮನಿಗೆ ವಿವಾಹ ಮಾಡಬೇಕೆಂದು ನಿಶ್ಚಯಿಸಿದನು.

ಮಲಯ ರಾಜ್ಯದ ಸರಿಹದ್ದಿನಲ್ಲಿಯೇ ಕರ್ಪೂರ ರಾಜ್ಯವಿದ್ದಿತು. ಆ ರಾಜನ ಮಗಳು ಪುಷ್ಪವಲ್ಲಿ ಅತ್ಯಂತ ಸುಂದರಿಯಾಗಿರುವಳೆಂದೂ, ಅವಳ ಸೌಂದರ್ಯಕ್ಕೆ ಸಾಟಿಯಾದವಳು ಪ್ರಪಂಚದಲ್ಲಿ ಯಾರೂ ಇಲ್ಲವೆಂದೂ ಎಲ್ಲರೂ ಹೇಳುತ್ತಿದ್ದರು. ತನ್ನ ಮದುವೆಯ ಪ್ರಸ್ತಾಪಬಂದಾಗ ಜಯವರ್ಮನು ತಂದೆಯೊಂದಿಗೆ, ತಾನು ಕರ್ಪೂರ ರಾಜಕುಮಾರಿಯನ್ನೇ ಮದುವೆಯಾಗುವೆನೆಂದು ಹೇಳಿಬಿಟ್ಟನು. ರಾಜನಿಗೆ ಚಿಂತೆಯಾಯಿತು.

ಕಾರಣವೇನೆಂದರೆ, ಮಲಯ ಮತ್ತು ಕರ್ಪೂರ ರಾಜ್ಯಗಳ ನಡುವೆ ಹಿಂದಿನ ಕಾಲದಿಂದಲೂ ಆಗಾಗ ಯುದ್ಧಗಳು ನಡೆಯುತ್ತಿದ್ದುವು. ಕೇತುವರ್ಮನ ಕಾಲದಲ್ಲಿ ಯುದ್ಧವು ನಡೆಯದಿದ್ದರೂ ಪರಸ್ಪರ ಶತ್ರುಗಳೆಂಬ ಭಾವನೆ ಮನಸ್ಸಿನಲ್ಲಿ ಇದ್ದೇ ಇದ್ದಿತು. ಅಂತಲೇ ಕೇತುವರ್ಮನು ಈ ಸಮಸ್ಯೆಯನ್ನು ಕುರಿತು ಮಂತ್ರಿಯೊಂದಿಗೆ ಆಲೋಚನೆ ಕೇಳಿದನು. "ಮಹಾರಾಜರೆ, ಮಲಯ ಕರ್ಪೂರ ರಾಜ್ಯಗಳ ನಡುವೆ ಶತ್ರುತ್ವವೆಂಬುದು ಯಾವಕಾಲದ ಮಾತೋ ಏನೋ! ನೀವು ಏನೂ ಸಂದೇಹಪಡದೆ ತಮ್ಮ ಅಭಿಮತವನ್ನು ಆ ರಾಜನಿಗೆ ತಿಳಿಸಿಬಿಡಿ. ಶುಭವೇ ಆಗುತ್ತದೆ" ಎಂದನು ಮಂತ್ರಿ.

ಅದರಂತೆ ಕೇತುವರ್ಮನು ಕರ್ಪೂರ ರಾಜನಿಗೆ, ತನ್ನ ಮಗನ ವಿವಾಹವನ್ನು ಕುರಿತು ತಿಳಿಯಪಡಿಸುತ್ತ, ರಾಜಕುಮಾರಿ ಪುಷ್ಪವತಿಯ ಚಿತ್ರಪಟವನ್ನು ಕೂಡಾ ಕಳುಹಿಸಿ ಕೊಡಬೇಕೆಂದು ಪತ್ರ ಕಳುಹಿಸಿದನು. ಮುಂದೆ ಕೆಲವೇ ದಿನಗಳಲ್ಲಿ ಪುಷ್ಪವಲ್ಲಿಯ ಚಿತ್ರಪಟವು ಕೇತುವರ್ಮನಿಗೆ ಬಂದು ಸೇರಿತು. ಅದರಲ್ಲಿ ಕಾಣುವ ರಾಜಕುಮಾರಿಯ ಅಂದಚಂದಗಳಿಗೆ ಯುವರಾಜ ಜಯವರ್ಮನೂ, ಉಳಿದವರೂ ಮೆಚ್ಚಿ ತಲೆದೂಗಿದರು.

ಆದರೆ ಆಸ್ಥಾನದ ಪಂಡಿತರಲ್ಲೊಬ್ಬನು ರಾಜನೊಂದಿಗೆ, "ಮಹಾರಾಜಾ, ಈ ಚಿತ್ರ ಪಟವನ್ನು ತಯಾರಿಸಿದವನು ಕರ್ಪೂರ ದೇಶದ ಆಸ್ಥಾನದ ಚಿತ್ರಕಾರ. ಅಂತಹವರು ಮನಸ್ಸು ಮಾಡಿದರೆ

ರಾಂಬಾಬು

ಕುರೂಪಿಯನ್ನಾದರೂ ಪರಮಸುಂದರಿಯಾಗಿ ಚಿತ್ರಿಸಿಬಿಡುತ್ತಾರೆ. ಆದ್ದರಿಂದ ಅಲ್ಲಿಗೆ ನಮ್ಮ ಚಿತ್ರಕಾರರನ್ನು ಕಳುಹಿಸಿ, ಅವರಿಂದ ಪುಷ್ಪವಲ್ಲಿಯ ಚಿತ್ರವನ್ನು ಬರೆಸಿ ತರಿಸುವುದು ಒಳ್ಳೆಯದು" ಎಂದನು.

ರಾಜನಿಗೆ ಪಂಡಿತನ ಸಲಹೆ ನಿಜವೆನಿಸಿತು. ಆವನು ಒಳ್ಳೆಯ ಕುಶಲರಾದ ಮೂವರು ಚಿತ್ರಕಾರರನ್ನು ಕರ್ಪೂರ ರಾಜ್ಯಕ್ಕೆ ಕಳುಹಿಸಿಕೊಟ್ಟನು. ಆವರು ಕೆಲವು ದಿನಗಳ ಮೇಲೆ ತಾವು ಬರೆದ ಚಿತ್ರಪಟಗಳೊಂದಿಗೆ ಹಿಂದಿರುಗಿ ಬಂದರು.

ಮೂವರು ಚಿತ್ರಕಾರರಲ್ಲಿ ಒಬ್ಬನು ರಾಜಕುಟುಂಬದವರಿಗೆ ತಾನು ಚಿತ್ರಿಸಿದ ಪುಷ್ಪವಲ್ಲಿಯ ಚಿತ್ರವನ್ನು ತೋರಿಸಿದನು. ಅದನ್ನು ನೋಡಿ ಕೇತುವರ್ಮ ರಾಜನೇ ಮೊದಲಾದವರೆಲ್ಲಾ ಆತ್ಯಾಶ್ಚರ್ಯಪಟ್ಟರು. ಈ ಚಿತ್ರವು ಕರ್ಪೂರರಾಜನು ಕಳುಹಿಸಿದ ಚಿತ್ರಕ್ಕಿಂತಲೂ ಹೆಚ್ಚು ಸೌಂದರ್ಯದಿಂದ ಕೂಡಿತ್ತು.

ರಾಜನು ಆ ಚಿತ್ರಕಾರನಿಗೆ ಬಹುಮಾನ ಕೊಟ್ಟು ಕಳುಹಿಸಿ, ಎರಡನೇ ಚಿತ್ರಕಾರನು ಬರೆದ ಚಿತ್ರವನ್ನು ನೋಡಿದನು. ಅದರಲ್ಲಿ ರಾಜಕುಮಾರಿ ಅಪ್ಸರಸಿಯನ್ನು ಮೀರುವ ಸೌಂದರ್ಯವತಿಯಾಗಿ ರಾರಾಜಿಸುತ್ತಿದ್ದಳು. ರಾಜನು ಈ ಚಿತ್ರಕಾರನಿಗೆ ಮೊದಲನೆಯವನಿಗಿಂತ ಹೆಚ್ಚಿನ ಬಹುಮಾನ ಕೊಟ್ಟು ಕಳುಹಿಸಿ, ಮೂರನೇ ಚಿತ್ರಕಾರನನ್ನು ಕರೆಸಿಕೊಂಡನು.

ಮೂರನೇ ಚಿತ್ರಕಾರನು ಕದಲದೆ ಸುಮ್ಮನೆ ನಿಂತಿರುವುದನ್ನು ನೋಡಿ, "ನೀನು ಚಿತ್ರಿಸಿದ ರಾಜಕುಮಾರಿಯ ಚಿತ್ರ ಪಟವೆಲ್ಲಿದೆ ?" ಎಂದು ಕೇಳಿದನು ರಾಜ.

"ಮಹಾರಾಜಾ ! ಕ್ಷಮಿಸಬೇಕು. ನಾನು ರಾಜಕುಮಾರಿಯನ್ನು ಚಿತ್ರಿಸಲೇ ಇಲ್ಲ. ಆಕೆ ಸೌಂದರ್ಯದಲ್ಲಿ ದೇವಕನ್ಯೆಯರನ್ನು ಹೋಲುತಿದ್ದಾಳೆ. ನೋಡಬೇಕೇ ಹೊರತು ಆ ಸೌಂದರ್ಯವನ್ನು ಚಿತ್ರಿಸುವುದೆಂದರೆ, ಎಷ್ಟು ದೊಡ್ಡ ಚಿತ್ರಕಾರನಿಗಾದರೂ ಸಾಧ್ಯವಾಗುವಂತಹುದಲ್ಲ. ಆ ಕಾರಣದಿಂದಲೇ ಕರ್ಪೂರ ರಾಜ್ಯದ ಚಿತ್ರಕಾರನು ಅವಳನ್ನು ಒಂದು ವಿಧವಾಗಿಯೂ, ನಮ್ಮ ಚಿತ್ರಕಾರರು ಮತ್ತೊಂದು ವಿಧವಾಗಿಯೂ ಚಿತ್ರಿಸಿದ್ದಾರೆ. ಇವುಗಲ್ಲಿ ಯಾವುದು ಪುಷ್ಪವಲ್ಲಿಗೆ ತಕ್ಕ ಪ್ರತಿರೂಪವೋ ನೀವಾರೂ ಯೋಚಿಸಲಿಲ್ಲ" ಎಂದನು ಮೂರನೇ ಚಿತ್ರಕಾರ.

ರಾಜನು ತಾನು ಮಾಡಿದ ತಪ್ಪನ್ನು ಗುರುತಿಸಿ, ಚಿತ್ರವೇ ಬರೆಯದ ಚಿತ್ರಕಾರನನ್ನು ದೊಡ್ಡ ರೀತಿಯಲ್ಲಿ ಸನ್ಮಾನಿಸಿ, ಕರ್ಪೂರ ದೇಶದ ರಾಜನೊಂದಿಗೆ, ವಿವಾಹ ಸಂಬಂಧವನ್ನು ಸ್ಥಿರಪಡಿಸಿದನು. ಮಹಾವೈಭವದಿಂದ ಮದುವೆಯಾಯಿತು.





# ಪಂಡಿತನ ಬಂಡವಾಳ

ಚಂದ್ರಗಿರಿಯ ರಾಜನಾಗಿದ್ದ ಜಯಚಂದ್ರ ಭೂಪಾಲನು ಕವಿಗಳನ್ನೂ, ಪಂಡಿತರನ್ನೂ ಪೋಷಿಸುವುದರಲ್ಲಿ ಬಹಳ ಹೆಮ್ಮೆಪಡುತ್ತಿದ್ದನು. ತಾನು ಪಂಡಿತನೆಂದು ಹೇಳಿದವರಿಗೆ ಸುಲಭವಾಗಿ ಸಭಾಸ್ಥಾನಕ್ಕೆ ಪ್ರವೇಶ ದೊರೆಯುತ್ತಿತ್ತು. ರುದ್ರಕವಿ ಎಂಬವನು ಆಸ್ಥಾನದಲ್ಲಿ ಕವಿ ದಿಗ್ಗಜನೆಂದು ಬಿರುದು ಪಡೆದಿದ್ದನು. ಅವನೇ ಪ್ರಧಾನ ವಿದ್ವಾಂಸನಾಗಿದ್ದನೆಂದು ಬೇರೆ ಹೇಳಬೇಕಾಗಿಲ್ಲ.

ಆದರೆ ನಿಜವಾದ ಪಾಂಡಿತ್ಯವುಳ್ಳ ವಿಶಾಲನೆಂಬವನು ಕೂಡ ಆಸ್ಥಾನದಲ್ಲಿದ್ದವನಾದರೂ, ತಾನು ಮಹಾ ಪಂಡಿತನೆಂದು ತೋರಿಸಿಕೊಳ್ಳುವ ಗುಣ ಅವನಲ್ಲಿರಲಿಲ್ಲ. ಮುಖಸ್ತುತಿಗೆ ಉಬ್ಬಿ ಮೈಮರೆಯುವ ರಾಜನ ಹತ್ತಿರ ರುದ್ರಕವಿಗಿರುವಷ್ಟು ಪ್ರಭಾವ ಬೇರೆ ಯಾರಿಗೂ ಇರಲಿಲ್ಲ. ವಿಶಾಲನಿಗೆ ಈ ಸಂಗತಿ ಗೊತ್ತಿದ್ದರೂ ಸುಮ್ಮನಿರುತ್ತಿದ್ದ.

ಆದುದರಿಂದ ರುದ್ರಕವಿ ರಾಜನಿಗೆ ತನ್ನ ಮೇಲಿರುವ ನಂಬುಗೆಯನ್ನು ಧನ ಸಂಪಾದನೆಗಾಗಿ ಉಪಯೋಗಿಸಿಕೊಳ್ಳುತ್ತಿದ್ದನು. ತನಗಿಷ್ಟು ದಕ್ಷಿಣೆ ಕೊಟ್ಟು ಆಶ್ರಯ ಬೇಡಿದವರಿಗೆ ನಾಲ್ಕಾರು ಕವಿತ್ವಗಳನ್ನು ಹೇಳಿಕೊಟ್ಟು, ಅವುಗಳನ್ನು ರಾಜನ ಮುಂದೆ ಪ್ರದರ್ಶಿಸುವಂತೆ ಮಾಡಿ ಸಂತೋಷಪಡಿಸಿ, ಅಂಥವರಿಗೆ ಪ್ರಭುತ್ವ ಶಾಖೆಯಲ್ಲಿ ಉದ್ಯೋಗಗಳನ್ನು ಕೂಡಾ ಕೊಡಿಸುತ್ತಿದ್ದನು. ಹಾಗೆ ಪ್ರಯೋಜನ ಪಡೆದವರು ರುದ್ರಕವಿಗೆ ಗುಟ್ಟಾಗಿ ಲಂಚ ಕೊಡುತ್ತಲೂ ಇದ್ದರು.

ಒಂದು ದಿನ ರುದ್ರಕವಿಯ ಬಳಿಗೆ ಚಪಲನೆಂಬವನು ಬಂದನು. ಅವನಿಗೆ ಶುದ್ಧವಾಗಿ ಮಾತಾಡುವಷ್ಟು ಕೂಡ ಭಾಷಾಜ್ಞಾನವಿರಲಿಲ್ಲ. ಆದರೂ ಪ್ರಭುತ್ವ ಶಾಖೆಯಲ್ಲಿ ತನಗೆ ಉದ್ಯೋಗ ಸಂಪಾದಿಸಬೇಕೆಂದು ಅವನಿಗೆ ಆಸೆ. ಅವನು ಐನೂರರಷ್ಟು ಹಣದ ಗಂಟನ್ನು ತಂದು ರುದ್ರಕವಿಯ ಪಾದದಡಿಯಲ್ಲಿಟ್ಟು ತನ್ನ ಆಸೆಯನ್ನು ತಿಳಿಸಿದನು.

ಪ್ರಭುತ್ವ ಶಾಖೆಯಲ್ಲಿ ಯಾವ ಉದ್ಯೋಗಕ್ಕೂ ಅರ್ಹನಲ್ಲದ ಅವನ ಗಂಟನ್ನು ಬಿಡಲು ಮನಸ್ಸಿಲ್ಲದೆ, ರುದ್ರಕವಿ "ನಿನಗೆ ನಾಲ್ಕು ಕವಿತ್ವ ಹೇಳಿಕೊಡುತ್ತೇನೆ. ಅದನ್ನು ಕೇಳಿ ಮಹಾರಾಜರು ಈ ಹಣದ ನಾಲ್ಕು ಪಾಲು ಬಹುಮಾನ ಕೊಡುತ್ತಾರೆ. ತೆಗೆದುಕೊಂಡು ಹೋಗಿ ಸುಖವಾಗಿರು" ಎಂದು

ಬಿ. ಎ. ರಾವ್

ಹೇಳಿ, ನಾಲ್ಕು ಪದ್ಯಗಳನ್ನು ಅವನಿಗೆ ಬಾಯಿ ಪಾಠ ಮಾಡಿಸಲು ನೋಡಿದನು. ಸುಲಭ ಪದ ಗಳನ್ನು ಕೂಡಾ ಸರಿಯಾಗಿ ಉಚ್ಚರಿಸಲಾಗದ ಚಪಲನು ಪದ್ಯಗಳ ಉಚ್ಚಾರಣೆಗೂ ಯೋಗ್ಯನಲ್ಲ ವೆಂದು ಗೊತ್ತಾಯಿತು. ಆದರೆ ರುದ್ರಕವಿಗೆ ಅವನು ಕೊಟ್ಟ ಐನೂರು ರೂಪಾಯಿಯನ್ನು ಬಿಡಲಿಷ್ಟವಿಲ್ಲ.

ಅಂತೆಯೇ ರುದ್ರಕವಿ ಚಪಲನಿಗೆ ಏನು ಮಾಡ ಬೇಕೆಂದು ವಿವರವಾಗಿ ಹೇಳಿದನು. ಎಂತಹ ಪರಿ ಸ್ಥಿತಿಯಲ್ಲಿಯೂ ರಾಜಸಭೆಯಲ್ಲಿ ಬಾಯಿ ತೆರೆದು ಮಾತಾಡಬಾರದೆಂದು ಒತ್ತಿ ಹೇಳಿದನು.

ಮರುದಿನ ರಾಜನು ಸಭೆ ನಡೆಯಿಸಿಕೊಂಡಿರುವಾಗ ರುದ್ರಕವಿ ಪಂಡಿತ ವೇಷದಲ್ಲಿರುವ ಚಪಲನನ್ನು ಕರೆದು ಕೊಂಡು ಸಭೆಗೆ ಪ್ರವೇಶಿಸಿ "ಮಹಾಪ್ರಭೂ ! ಚಪಲ ಬದ್ಧ ಪಂಡಿತರೆಂಬ ಇವರ ಪಾಂಡಿತ್ಯಕ್ಕೆ ಸಾಟಿಯಿಲ್ಲ. ವೇದಾಂತಸಾರವೆಲ್ಲಾ ಇವರಿಗೆ ಕರತಲಾಮಲಕ. ತಮ್ಮ ಪಾಂಡಿತ್ಯವನ್ನು ಹಸ್ತ, ಮಸ್ತಕ ಚಾಲನೆಯಿಂದಲೇ ತಿಳಿಯಪಡಿಸುವ ಮೌನ ದೀಕ್ಷಿತರು" ಎಂದನು.

ರಾಜನು ಬಹಳ ಸಂತೋಷಪಟ್ಟು "ಹಾಗಾದರೆ ಇವರ ಪಾಂಡಿತ್ಯವನ್ನು ನೋಡಲೇಬೇಕು. ಸಭೆಯಲ್ಲಿ ಪ್ರದರ್ಶಿಸೋಣವಾಗಲಿ" ಎಂದನು.

ರುದ್ರಕವಿ ಚಪಲನೊಂದಿಗೆ, "ಅವಧರಿಸಿದಿರಷ್ಟೇ ಮಹಾಸ್ವಾಮಿ ! ಈಗ ನನ್ನ ಸಂದೇಹವೊಂದನ್ನು ತಮ್ಮ ಮುಂದಿಡುತ್ತೇನೆ. ಉತ್ತರ ದಯಪಾಲಿಸಿರಿ. ಈ ಜಗತ್ತಿಗೆಲ್ಲಾ ಮೂಲಾಧಾರ ಯಾವುದು ? ಅಥವಾ ಯಾರು ?" ಎಂದನು.

ಚಪಲನು ಸ್ವಲ್ಪವೂ ಸಂಕೋಚಪಡದೆ ಆಕಾಶದ ಕಡೆಗೆ ಕೈಗಳನ್ನೆತ್ತಿ, ಬೆರಳುಗಳನ್ನು ಮುಚ್ಚಿ ಅರಳಿಸಿ, ಪ್ರಕಾಶವನ್ನು ಅಭಿನಯಿಸಿದನು.

ರುದ್ರಕವಿ ರಾಜನನ್ನು ನೋಡಿ, "ಪ್ರಭೂ, ಇವರು ವೇದಾಂತಸಾರದ ತತ್ವವನ್ನೇ ತೋರಿಸಿದರು. ನನ್ನ ಪ್ರಶ್ನೆಗೆ ಸಾಧಾರಣದ ಪಂಡಿತನಾಗಿರುತ್ತಿದ್ದರೆ ಭಗವಂತ ನೆಂದು ಉತ್ತರ ಕೊಡುತ್ತಿದ್ದನು. ಇವರು ಸೂರ್ಯ ಭಗವಾನನೆಂದು ಹೇಳುತ್ತಾರೆ. ಸೂರ್ಯನಿಲ್ಲದಿದ್ದರೆ ಪ್ರಪಂಚವೇ ಇರಲು ಸಾಧ್ಯವಿಲ್ಲವಷ್ಟೆ ? ಮಳೆ



ಭಿಸಿಲುಗಳಿಲ್ಲದಿದ್ದರೆ ಏನಿದೆ ? ಬರೀ ಬರಡು ನೆಲ ಮಾತ್ರ ತಾನೆ ?" ಎಂದು ವ್ಯಾಖ್ಯಾನಿಸಿದನು.

"ಆಹಾ !" ಎಂದು ತಲೆಯೊಲಿದನು ರಾಜ. ಆಮೇಲೆ ರುದ್ರಕವಿ ಚಪಲನೊಂದಿಗೆ, "ಅಯ್ಯಾ, ನಮ್ಮ ಶರೀರದಲ್ಲಿ ಪ್ರಧಾನ ಭಾಗವು ಯಾವುದೆಂದು ಹೇಳುವಿರಾ ? " ಎಂದನು.

ಚಪಲನು ಮೂಗಿನ ಮೇಲೆ ಬೆರಳಿಟ್ಟು ತೋರಿಸಿದನು. ರುದ್ರಕವಿ ಅತ್ಯಾಶ್ಚರ್ಯಪಟ್ಟು "ಅದ್ಭುತ ! ಅಪಾರ ! ನಮ್ಮ ಪೂರ್ವಿಕರೇನೋ ಸರ್ವೇಂದ್ರಿಯಗಳಲ್ಲಿ ನಯನವೇ ಪ್ರಧಾನವೆಂದರು. ಆದರೆ ಈ ಚಪಲ ಪಂಡಿತರು ಮೂಗಿಗೆ ಪ್ರಧಾನ ಕೊಡುತ್ತಾರೆ. ನಿಜತಾನೇ ? ಕಣ್ಣುಗಳಿಲ್ಲದೆ ಜೀವಿಸುವವರು ಎಷ್ಟು ಮಂದಿ ಇಲ್ಲ ? ಉಸಿರಾಡಲು ಮೂಗಿಲ್ಲದಿದ್ದರೆ ಕ್ಷಣದಲ್ಲಿ ಆಯುಷ್ಯ ಮುಗಿಯುತ್ತದೆಂಬುದನ್ನು ಯಾರು ತಾನೇ ಅಲ್ಲಗಳೆದಾರು ?" ಎಂದನು.

ಈ ಭಾಷ್ಯವು ರಾಜನನ್ನು ತುಂಬಾ ಸಂತೃಪ್ತಿಗೊಳಿಸಿತು. ಮೂರನೇ ಸಾರಿ ರುದ್ರಕವಿ ಚಪಲನನ್ನು ನೋಡಿ, "ಅಯ್ಯಾ, ಕವಿ ಮತ್ತು ರಾಜ ಈ ಇಬ್ಬರಲ್ಲಿ ಹೆಚ್ಚಿನವರು ಯಾರು ಎಂಬುದನ್ನು ಹೇಳುವಿರಾ ? " ಎಂದನು.

ಚಪಲನು ಕೈ ಎತ್ತಿ ರುದ್ರಕವಿಯನ್ನು ತೋರಿಸಿ, ತರುವಾಯ ರಾಜನನ್ನು ತೋರಿಸಿ, ಅಲ್ಲವೆಂಬಂತೆ ತಲೆಯಾಡಿಸಿ, ಮತ್ತೆ ರಾಜನನ್ನೂ ರುದ್ರಕವಿಯನ್ನೂ ತೋರಿಸಿ ಹೌದೆಂಬಂತೆ ತಲೆದೂಗಿದನು.

ಅದನ್ನು ನೋಡಿ ಎಲ್ಲರಿಗೂ ರಾಜನಿಗಿಂತಲೂ ರುದ್ರಕವಿ ಹೆಚ್ಚಿನವನೆಂದು ಚಪಲ ಪಂಡಿತನು ಸೂಚಿಸಿದನೆನಿಸಿತು, ರಾಜನಿಗೂ ಅದೇ ಅರ್ಥವು ತೋರಿ, ಅವಮಾನವೆನಿಸಿ ಅಪ್ರತಿಭನಾದನು. ಪರಿಸ್ಥಿತಿ ವಿಷಮಿಸದಂತೆ ರುದ್ರಕವಿ ಕೂಡಲೇ ತನ್ನ ವ್ಯಾಖ್ಯಾನವನ್ನು ಹೀಗೆ ಪ್ರಾರಂಭಿಸಿದನು :

"ಪ್ರಭೂ ! ವೇದಾಂತ ಸಾಗರವನ್ನು ಮಥಿಸಿ ಬೆಣ್ಣೆ ತೆಗೆದುಕೊಂಡ ಇವರಿಂದ ಗಹನವಾದ ಅರ್ಥ ಹೊರಟಿದೆ. ತಟ್ಟನೆ ಕಾಣುವ ಮೇಲಿನ ಅಪಾರ್ಥವನ್ನು ಬಗೆದು ನೋಡಿದರೆ, ಅದರೊಳಗಿನ ನಿಗೂಢ



ಭಾವವು ಹೊರಗಾಗುತ್ತದೆ. ಮೊದಲು ನನ್ನನ್ನು ತೋರಿಸಿ ಆಮೇಲೆ ನಿಮ್ಮನ್ನು ತೋರಿಸಿದರು. ಅಂದರೆ ಕವಿರಾಜರೆಂದು ಅರ್ಥ. ಕವಿರಾಜನನ್ನು ಪೋಷಿಸುವವರು ರಾಜರೆಂದು ಭಾವ. ರಾಜನಿಲ್ಲ ದಿದ್ದರೆ ನಾನೂ ಇಲ್ಲ ಎಂದು ತಲೆಯಾಡಿಸಿದರು. ಆದುದರಿಂದ ಕವಿಗಿಂತ ರಾಜರೇ ಹೆಚ್ಚಿನವರು ಎಂದಾಯಿತು."

ಜಯಚಂದ್ರ ರಾಜನು ಹಿಡಿಸಲಾರದಷ್ಟು ಆನಂದ ದಿಂದ ಸಿಂಹಾಸನದಿಂದೆದ್ದು ಬಂದು ಕೊರಳಿನಲ್ಲಿದ್ದ ವಜ್ರಹಾರವನ್ನು ತೆಗೆದು ಚಪಲನಿಗೆ ಕಾಣಿಕೆ ನೀಡುತ್ತ, "ತಮ್ಮ ಪಾಂಡಿತ್ಯವೂ ಅರ್ಥವತ್ತಾದ ಸಂಜ್ಞೋತ್ತರಗಳೂ ನನ್ನನ್ನು ಬಹಳ ಸಂತೋಷ ಪಡಿಸಿದುವು. ನಿಮ್ಮನ್ನು ನನ್ನ ಆಸ್ಥಾನದಲ್ಲಿ ಅಲಂಕರಿಸಿ ಕೊಳ್ಳಬೇಕೆಂದಿದ್ದೇನೆ" ಎಂದನು.

"ಪ್ರಭೂ! ಸಂಚಾರ ಕ್ರಮದಲ್ಲಿ ಬಂದವರು. ಗೌರವಧನವೇನಾದರೂ ಕೊಟ್ಟರೆ ಸಂಚಾರದ ಖರ್ಚಿಗೆ ಉಪಯೋಗಿಸಿಕೊಳ್ಳುವರು, ಬೇರೆ ಯಾವ ಆಶೆಗಳೂ ಇವರಿಗಿಲ್ಲ" ಎಂದನು ಕೂಡಲೇ ರುದ್ರಕವಿ.

ಆಗ ವಿಶಾಲ ಪಂಡಿತನು ಎದ್ದು, "ಮಹಾ ಪಂಡಿತರ ಮುಂದೆ ನನ್ನದೊಂದು ಚಿಕ್ಕ ಸಂದೇಹ. ನನ್ನ ಅಭಿಪ್ರಾಯದಲ್ಲಿ ಜಗತ್ತಿಗೆ ಆಧಾರವು ತಂದೆ ತಾಯಿಗಳೇ. ಅವರಿಲ್ಲದಿದ್ದರೆ ನಾವಾರೂ ಇಲ್ಲ. ನಾನು ಹೇಳಿದ್ದು ಸರಿಯಲ್ಲವೆನ್ನುವಿರಾ ?" ಎಂದನು.

ಚಪಲನು ಗಾಬರಿಯಾಗಿ ರುದ್ರಕವಿಯನ್ನು ನೋಡಿ ಎಂಜಲು ನುಂಗಿದನು.

ಅದನ್ನು ನೋಡಿ ವಿಶಾಲ ಪಂಡಿತನು "ಅಯ್ಯೋ, ತಾವು ಮೂಕರೆಂದು ತಿಳಿಯದೆ ಕೇಳಿದೆ. ಇಷ್ಟು ದೊಡ್ಡ ಪಂಡಿತರು ಬಾಯಿ ಬಾರದ ಮೂಕರಾಗಿರು ವುದು ನಮ್ಮ ದುರದೃಷ್ಟ" ಎಂದನು.

ಅದನ್ನು ಕೇಳಿ ಚಪಲನು ರೋಷದಿಂದ, "ನಾನೇನ್ ಮೂಕಾ ಗೀಕಾ ಅಲ್ಲಾರೀ. ನೀವು ಮಾತ್ರ ಈ ರುದ್ರಕವ್ಯೋಳಿಗಿಂತ ದೊಡ್ಡೋರೇನು ಪರಸ್ನೇ ಕೇಳ್ತಾರೆ !" ಎಂದನು.

ಅವನ ಮಾತು ಕೇಳಿದ ಕೂಡಲೇ ರಾಜನಿಗೂ ಸಭೆಯಲ್ಲಿರುವವರಿಗೂ ಅವನು ಎಂತಹ ಪಂಡಿತ ನೆಂಬುದು ಗೊತ್ತಾಯಿತು. ವಿಚಾರಿಸಿದಾಗ ಅವನು ಹೇಳಿದ ಸಂಕೇತ ಸಮಾಧಾನಗಳೆಲ್ಲ ರುದ್ರಕವಿ ಕಲಿಸಿ ಕೊಟ್ಟುದೆಂದೂ ಬಯಲಾಯಿತು. ಅವನ ಲಂಚದ ಸಂಗತಿಯೂ ಹೊರಬಿತ್ತು. ರಾಜನು ಆತ್ಮಗ್ರನಾಗಿ ಆಗಿಂದಾಗಲೇ ರುದ್ರಕವಿಯನ್ನು ಆಸ್ಥಾನದಿಂದ ಬಹಿಷ್ಕರಿಸಿದನು. ನಿಜ ಪಂಡಿತನಾದ ವಿಶಾಲನನ್ನು ಆಸ್ಥಾನದ ಪ್ರಧಾನ ವಿದ್ವಾಂಸನನ್ನಾಗಿಮಾಡಿ, ಎಚ್ಚರಿಕೆಯನ್ನೂ ವಹಿಸಿಕೊಂಡನು.





# ಅನಾದರಣೆ

ಬ್ರಹ್ಮದತ್ತನು ಕಾಶೀರಾಜ್ಯವನ್ನು ಪಾಲಿಸಿಕೊಂಡಿದ್ದ ಕಾಲದಲ್ಲಿ, ಬೋಧಿಸತ್ವನು ರಾಜನ ಆಸ್ಥಾನದಲ್ಲಿ ಪಂಡಿತಾಮಾತ್ಯನಾಗಿದ್ದನು. ರಾಜಸಭೆಯಲ್ಲಿ ಒಳ್ಳೆಯ ಗೌರವ ಅವನಿಗಿದ್ದಿತು.

ಬ್ರಹ್ಮದತ್ತ ರಾಜನ ಮಗನು ಒಳ್ಳೆಯ ಗುಣದವನಾಗಿರಲಿಲ್ಲ. ಒಂದು ಸಂದರ್ಭದಲ್ಲಿ ರಾಜನು ಮಗನೊಂದಿಗೆ ಬಹಳವಾಗಿ ಸಿಟ್ಟಿಗೆದ್ದು ಅವನನ್ನು ತನ್ನ ರಾಜ್ಯದಿಂದಲೇ ಹೊರಗೆ ಹಾಕಿಸಿಬಿಟ್ಟನು. ತಂದೆ ಬದುಕಿರುವವರೆಗೆ ತಾನು ಬರಲಾರೆನೆಂದು ಹೇಳಿ ರಾಜಕುಮಾರನು ಹೆಂಡತಿಯನ್ನು ಕರೆದುಕೊಂಡು ದೇಶಾಂತರಗಳಲ್ಲಿ ತಿರುಗುತ್ತ. ಅನೇಕ ಕಷ್ಟಗಳನ್ನು ಅನುಭವಿಸಿದನು. ನಿಲ್ಲಲು ನೆರಳಿಲ್ಲದೆ, ತಿನ್ನಲು ತಿಂಡಿಯಿಲ್ಲದೆ ಗಂಡನು ಕಷ್ಟಪಡುತ್ತಿರುವಾಗ, ಮಹಾ ಸಾಧ್ವಿಯಾದ ಅವನ ಹೆಂಡತಿ ಬಹಳ ಸಹನೆಯಿಂದ ಅವನ ಕಷ್ಟಗಳೆಲ್ಲವನ್ನೂ ತಾನೂ ಅನುಭವಿಸುತ್ತ, ಅವನನ್ನು ಸಂತೋಷಪಡಿಸಲು ಪ್ರಯತ್ನಿಸಿಕೊಂಡಿದ್ದಳು.

ಮುಂದೆ ಎರಡು ವರ್ಷಗಳಲ್ಲಿ ಬ್ರಹ್ಮದತ್ತನು ತೀರಿಹೋದನು. ಆ ಸಮಾಚಾರ ತಿಳಿದು ಬ್ರಹ್ಮದತ್ತನ ಕುಮಾರನು ಬಹಳ ಸಂತೋಷಪಟ್ಟು' ಯಾವಾಗ ತಾನು ಹೋಗಲಿಲ್ಲ, ಯಾವಾಗ ತಾನು ರಾಜನಾಗಲಿಲ್ಲ ಎಂದು ಅವಸರದಿಂದ ಕಾಶೀರಾಜ್ಯಕ್ಕೆ ಬರತೊಡಗಿದನು. ನಡೆಯುವಾಗ ಅವನ ಕಾಲುಗಳಿಗೆ ಅತ್ಯಂತ ವೇಗವು ಬರತೊಡಗಿತು. ಹೆಂಡತಿ ಅವನೊಂದಿಗೆ ಓಡಿಯೋಡಿ ನಡೆಯ ಬೇಕಾಯಿತು.

ರಾಜಕುಮಾರನಿಗೆ ಹೆಂಡತಿಯ ಗೊಡವೆ ಇರುವ ಹಾಗೆ ಕಾಣಲೇ ಇಲ್ಲ. ತನ್ನ ಹೆಂಡತಿ ತನ್ನೊಂದಿಗೆ ಸರಿಸಮನಾಗಿ ನಡೆಯಲಾರಳೆಂದೂ, ತನ್ನ ಕಷ್ಟಗಳಲ್ಲಿ ಅವಳು ಭಾಗವಹಿಸಿಕೊಂಡಂತೆ, ಅವಳ ಕಷ್ಟಸುಖಗಳಲ್ಲಿಯೂ ತಾನು ಗಮನ ಹರಿಸಬೇಕೆಂದೂ ಆ ಮೂಢನಿಗೆ ತಿಳಿಯಲೇ ಇಲ್ಲ. ಆದುದರಿಂದ ರಾಜಕುಮಾರನು ಆಹಾರವಿಶ್ರಾಂತಿಗಳ ಪರಿವೆಸಹಾ ಇಲ್ಲದೆ ಸಿಂಹಾಸನದ ಮೇಲೆ ಕುಳಿತುಕೊಳ್ಳುವ ಆತುರದಿಂದ ರಾತ್ರೀ ಹಗಲೂ ನಡೆಯುತ್ತ, ಹೆಂಡತಿಯನ್ನೂ ತನ್ನೊಂದಿಗೆ ಸರಿಸಮನಾಗಿ ಬಾರೆಂದು ಎಳೆಯುತ್ತ ಹೋಗುತ್ತಿದ್ದನು.

ಎಷ್ಟೇ ಸಿಂಹಾಸನದ ಯೋಗ್ಯತೆ ಇದ್ದವನಾದರೂ ಆಹಾರ ವಿಶ್ರಾಂತಿಗಳಿಲ್ಲದೆ ಎಷ್ಟು ದೂರವೇದು



ಮನೆಗೆ ಹೋದನು. ಆ ಮನೆಯವನು ಇಬ್ಬರಿಗೆ ಸರಿಹೋಗುವಷ್ಟು ಊಟವನ್ನು ಎಲೆಯಲ್ಲಿ ಕಟ್ಟಿ ಅವನ ಕೈಗೆ ಕೊಟ್ಟನು.

ಅದನ್ನು ತೆಗೆದುಕೊಂಡು ರಾಜಕುಮಾರನು ಹೆಂಡತಿ ಕುಳಿತಿರುವಲ್ಲಿಗೆ ಬರುತ್ತಾ ಹೀಗೆ ಆಲೋಚನೆ ಮಾಡಿದನು. "ಈ ಸ್ವಲ್ಪ ಊಟವನ್ನು ಇಬ್ಬರೂ ಸೇರಿ ಮಾಡಿದರೆ ಮತ್ತೆ ಸ್ವಲ್ಪ ಹೊತ್ತಿಗೆ ಹಸಿವಾಗುವುದು ಖಂಡಿತ. ಈ ಪೊಟ್ಟಣದಲ್ಲಿರುವುದು ನನ್ನೊಬ್ಬನ ಹಸಿವಿಗೂ ಪೂರ್ತಿಸಾಲದು. ತಾನೊಬ್ಬ ಗಟ್ಟಿಯಾಗಿದ್ದು ಕಾಶಿಗೆ ಹೋಗಿ ತಲಪುವುದು ಮುಖ್ಯ ವಲ್ಲದೆ ತನ್ನ ಹೆಂಡತಿ ಪ್ರಧಾನದವಳೇನಲ್ಲ. ನಾನು ಬೇಗಬೇಗನೇ ನಡೆಯ ಬೇಕಾದರೆ ಇದಿಷ್ಟೂ ನನಗೆ ಬೇಕೇಬೇಕು. ಮೊದಲೇ ಈ ಹೆಂಡತಿಯೊಬ್ಬಳು ನನಗೆ ಪ್ರತಿಬಂಧಕವಾಗಿದ್ದಾಳೆ. ಆದುದರಿಂದ ಇದನ್ನೆಲ್ಲಾ ನಾನೇ ತಿಂದು ಬಿಡುವುದೇ ಒಳ್ಳೆಯದು."

ಆ ನೀಚರಾಜಕುಮಾರನು ಈ ವಿಧವಾಗಿ ಆಲೋಚನೆಮಾಡಿ, ಹೆಂಡತಿಯಿರುವ ಸ್ಥಳಕ್ಕೆ ಬಂದು, "ನೀನು ಸ್ವಲ್ಪ ವಿಶ್ರಾಂತಿ ತೆಗೆದುಕೊಂಡೆಯಷ್ಟೆ? ಮುಂದೆ ನಡೆಯುತ್ತಾ ಇರು. ನಾನು ಸ್ವಲ್ಪ ಕುಳಿತು ಕೊಂಡು ವಿಶ್ರಾಂತಿಪಡೆದು ನಿನ್ನ ಹಿಂದೆಯೇ ಬರುತ್ತೇನೆ. ಮುಂದೆ ಒಂದು ಕಡೆಯಲ್ಲಿ ಕುಳಿತು ಆಹಾರ ತೆಗೆದುಕೊಳ್ಳೋಣ" ಎಂದನು.

ಗಂಡನ ಮಾತಿಗೆ ಇದಿರಾಡದೆ ಅವಳು ಎದ್ದು ಮುಂದೆ ಹೋಗತೊಡಗಿದಳು. ಅವಳು ಹೋದ ಕೂಡಲೇ ರಾಜಕುಮಾರನು ಪೊಟ್ಟಣದ ಆಹಾರ ವನ್ನು ತಾನೊಬ್ಬನೇ ತಿಂದು ಮುಗಿಸಿ, ಆ ಎಲೆ ಯನ್ನು ಪೊಟ್ಟಣದ ಹಾಗೆ ಸುತ್ತಿಕೊಂಡು ಬೇಗ ಬೇಗನೇ ಹೆಂಡತಿಯನ್ನು ಕಲೆತುಕೊಂಡನು.

ಹೆಂಡತಿ ಅವನ ಕೈಯಲ್ಲಿದ್ದ ಪೊಟ್ಟಣವನ್ನು ನೋಡುವುದರೊಳಗೇ ಅವನು ಬಹಳ ಕೋಪದಿಂದ, "ಛೀ ಛೀ! ಈ ಊರಿನವರು ಶುದ್ಧ ಮೋಸ

ನಡೆಯಬಲ್ಲನು? ದಾರಿಯಲ್ಲಿ ಅವನಿಗೂ ಕಟ್ಟ ಹಸಿವೆ ಶುರುವಾಯಿತು. ಹಸಿವು ತಾಳಿಕೊಳ್ಳುವುದರಲ್ಲಿ ಗಂಡುಸರಿಗಿಂತಲೂ ಹೆಂಗುಸರು ಗಟ್ಟಿಗರೆಂಬುದನ್ನು, ಅವನ ಹೆಂಡತಿ ಅವನೊಂದಿಗೆ ಅಯ್ಯೋ ಎಂದು ಕೂಗದೆ ನಡೆಯುವುದರಿಂದಲೇ ತಿಳಿಯಬಹುದಾಗಿತ್ತು. ಹೀಗೆ ನಡೆಯುತ್ತಾ ಅವರಿಬ್ಬರೂ ಒಂದಾನೊಂದು ಊರನ್ನು ಸೇರಿದರು.

ಆ ಊರಿನಲ್ಲಿದ್ದ ಕೆಲವರು ಅವರ ಪ್ರಯಾಣದ ಅವಸ್ಥೆಗೆ ಮರುಕಪಟ್ಟರು. ಅವರಲ್ಲೊಬ್ಬನು

"ಅಯ್ಯಾ, ನೀವು ಯಾರೋ, ಬಹಳ ಹಸಿವೆಯಿಂದ ಬಳಲಿದ ಪ್ರಯಾಣಿಕರಂತೆ ಕಾಣುವಿರಿ. ನಮ್ಮ ಮನೆಗೆ ಬಂದರೆ ನಿಮಗಿಷ್ಟು ಊಟ ಕಟ್ಟಿ ಕೊಡುತ್ತೇವೆ" ಎಂದರು.

ಬ್ರಹ್ಮದತ್ತನ ಮಗನು ಹೆಂಡತಿಯನ್ನು ಒಂದು ಕಡೆಯಲ್ಲಿ ಕುಳಿತು ಶ್ರಮ ನಿವಾರಿಸಿಕೊಂಡಿರುವಂತೆ ಹೇಳಿ, ಊಟ ಕೊಡುವೆನೆಂದು ಕರೆದವನೊಬ್ಬನ

ಗಾರರು ! ಬರೀ ಎಲೆಗಳನ್ನೇ ಪೊಟ್ಟಣದ ಹಾಗೆ ಕಟ್ಟಿ ಊಟದ ಬುತ್ತಿ ಅಂತ ಹೇಳಿಕೊಟ್ಟಿದ್ದಾರೆ ! ಪಾಪಿಗಳು !" ಎಂದನು.

ಆಗ ಅವನು ಅದುಮಿಕೊಂಡು ಬಿಡುವ ತೇಗಿನಿಂದಲೇ ನಿಜ ಸಂಗತಿ ಹೆಂಡತಿಗೆ ತಿಳಿಯದಿರಲಿಲ್ಲ. ಆದರೂ ಗಂಡನ ಮೇಲೆ ಕೋಪಿಸದೆ ಏನೂ ಹೇಳದೆ ಸುಮ್ಮನಿದ್ದಳು. ಅಂತೂ ಕೆಲವು ದಿನಗಳ ಮೇಲೆ ಇಬ್ಬರೂ ಕಾಶಿಯನ್ನು ತಲಪಿದರು. ಆಮೇಲೆ ಅವನಿಗೆ ರಾಜ್ಯಾಭಿಷೇಕವೂ ಆಯಿತು. ರಾಜನಾಗಿ ಸಿಂಹಾಸನದಲ್ಲಿ ಮಂಡಿಸಿದನು ಆ ಪತ್ನೀ ದ್ರೋಹಿ.

ರಾಜನಾದ ಮೇಲೆ ಕೂಡಾ ಅವನು ತನ್ನ ಹೆಂಡತಿಯನ್ನು ಕುರಿತು ಆಲೋಚಿಸಲೇ ಇಲ್ಲ. ತನ್ನ ಕಷ್ಟಗಳನ್ನು ಎಷ್ಟೋ ಸಹನೆಯಿಂದ ಹಂಚಿಕೊಂಡು ತನಗೆ ಸೇವೆ ಮಾಡಿದ ಹೆಂಡತಿಗೆ, ಈಗ ತನಗೆ ಬಂದ ಸುಖಗಳಲ್ಲಿ ಭಾಗಕೊಡುವುದು ತನ್ನ ಕರ್ತವ್ಯ ಧರ್ಮವೆಂದು ಅವನಿಗೆ ಹೊಳೆಯಲೇ ಇಲ್ಲ. ಅವಳು ಒಳ್ಳೆಯ ಬಟ್ಟೆಬರೆಗಳನ್ನು ಧರಿಸುವಳೋ ಇಲ್ಲವೋ, ಎಂಬುದರ ಲಕ್ಷ್ಯವೇ ಅವನಿಗಿರಲಿಲ್ಲ. ಆದುದರಿಂದ ಕಷ್ಟಕಾಲವು ತೀರಿ ಹೋದರೂ ಪಟ್ಟದರಾಣಿ ಮೊದಲಿನಂತೆಯೇ ಚಿಂತಾ ಸಮುದ್ರದಲ್ಲಿ ಮುಳುಗಿಕೊಂಡೇ ಇದ್ದಳು.

ರಾಜನ ಆಸ್ಥಾನದಲ್ಲಿ ಪಂಡಿತಾಮಾತ್ಯನಾಗಿರುವ ಬೋಧಿಸತ್ವನು ರಾಣಿಯ ಚಿಂತೆಯ ಮುಖವನ್ನು ಗಮನಿಸಿದನು. ಒಂದು ದಿನ ಅವಳನ್ನು ನೋಡಲು ಹೋದನು. ರಾಣಿ ಅವನನ್ನು ಆದರಿಸಿ ಗೌರವಿಸಿ ಉಚಿತ ಮರ್ಯಾದೆಗಳನ್ನು ಮಾಡಿದಳು.

ಆಗ ಬೋಧಿಸತ್ವನು ಅವಳನ್ನು ನೋಡಿ, "ತಾಯೇ, ತಮ್ಮ ಕಷ್ಟಗಳೆಲ್ಲ ತೀರಿ, ಒಳ್ಳೆಯ ದಿನಗಳು ಬಂದುದಕ್ಕೆ ಮಹಾರಾಣಿಯಿಂದ ನನಗೆ ಯಾವ ಬಹುಮಾನವೂ ಸಿಗಲಿಲ್ಲ. ಅದನ್ನು ನೆನಪಿಗೆ ತರಲು ಬಂದೆನು" ಎಂದನು.



"ಅಯ್ಯಾ, ನೀವು ಹಿರಿಯರು, ತಂದೆಯಂಥವರು. ನಿಜವೇ ಹೇಳುತ್ತೇನೆ. ನಾನು ಹೆಸರಿಗೆ ಮಾತ್ರ ರಾಣಿಯೇ ಹೊರತು ವಾಸ್ತವದಲ್ಲಿ ಅಂತಃಪುರದ ದಾಸಿಯರಿಗೂ, ನನಗೂ ಯಾವ ವ್ಯತ್ಯಾಸವೂ ಇಲ್ಲ. ಮಹಾರಾಜರ ಕಷ್ಟಗಳಲ್ಲಿ ಭಾಗಿನಿಯಾಗುವುದರ ಹೊರತು, ಅವರ ಸುಖದಲ್ಲಿ ಭಾಗಿನಿಯಾಗುವ ಭಾಗ್ಯ ನನಗಿಲ್ಲ. ಸಭಾಲಂಕಾರಕ್ಕಾಗಿ ನಾನೊಬ್ಬಳು ರಾಣಿ ಅಷ್ಟೇ. ಏನು ತಾನೇ ಕೊಡಲಿ ?" ಎಂದಳು.

ಹೀಗೆ ಹೇಳಿ ಹಾದಿಯಲ್ಲಿ ಗಂಡನು ಎಲ್ಲಾ ಆಹಾರವನ್ನು ತಾನೇ ಭುಜಿಸಿ ಅವಳನ್ನು ಮೋಸ ಪಡಿಸಿದುದನ್ನೂ ತಿಳಿಸಿ ಬಿಟ್ಟಳು. ಸಹನೆಗೂ ಒಂದು ಎಲ್ಲೆಯಿದೆಯಷ್ಟೆ ? ತನ್ನ ದುಃಖವನ್ನು ತನ್ನ ಹಿತಾಸಕ್ತಿಯುಳ್ಳ ಬೋಧಿಸತ್ವನೊಂದಿಗೆ ಹೇಳಿದುದರಿಂದ ಅವಳಿಗೆ ಎಷ್ಟೋ ಹಗುರಾಯಿತು. ಅವಳ ಪರಿಸ್ಥಿತಿ ಈಗಲೂ ಹಾಗೇ ಇದೆಯೆಂದು ಬೋಧಿಸತ್ವನಿಗೆ ಸ್ಪಷ್ಟವಾಯಿತು.

"ತಾಯೀ, ಚಿಂತಿಸಬೇಡ. ಈ ಸಂಗತಿಯನ್ನು ನಿನ್ನ ಬಾಯಿಯಿಂದ ತಿಳಿದುಕೊಳ್ಳಲಿಕ್ಕೇ ಬಂದೆನು. ನಾಳೆ ತುಂಬಿದ ಸಭೆಯಲ್ಲಿ ನಿನ್ನ ಹತ್ತಿರ ನಾನು ಈಗ ಕೇಳಿದ ಪ್ರಶ್ನೆಯನ್ನೇ ಕೇಳುತ್ತೇನೆ. ನೀನು ಮಾತ್ರ ಸ್ವಲ್ಪವೂ ಶಂಕಿಸದೆ ಈಗ ನಾನು ಹೇಳಿ ಕೊಡುವಂತೆ ಹೇಳು. ಆಮೇಲೆ ನಿನ್ನ ದುಃಖವು ಶಮನವಾಗುವ ಹಾಗೆ ನಾನು ನೋಡಿಕೊಳ್ಳುತ್ತೇನೆ" ಎಂದನು ಬೋಧಿಸತ್ವ.

ದಿನಾ ಸಭೆಕೂಡಿದಾಗ ರಾಜನು ಪಟ್ಟದ ರಾಣಿಯೊಂದಿಗೆ ಸ್ವಲ್ಪ ಹೊತ್ತು ಇದ್ದು, ಆಮೇಲೆ ರಾಣಿಯನ್ನು ಕಳುಹಿಸಿ ಬಿಡುವನು. ಅದರಂತೆ ಮರುದಿನ ಸಭೆಕೂಡಿದಾಗ ರಾಣಿ ಕೂಡಾ ಬಂದು ಕುಳಿತಳು. ಅವಳನ್ನು ನೋಡಿ ಬೋಧಿಸತ್ವನು, "ಮಹಾರಾಣಿಯವರು ಪಟ್ಟದಲ್ಲಿ ಕುಳಿತ ಮೇಲೆ ಭೃತ್ಯರ ವಿಷಯವನ್ನು ಮರೆತು ಹೋದ ಹಾಗಿದೆ" ಎಂದನು.

ಆಗ ರಾಣಿ, "ಪಂಡಿತಾ ಮಾತ್ಯರೇ. ಈ ರಾಣಿ ಹೆಸರಿಗೆ ಮಾತ್ರವಷ್ಟೇ ರಾಣಿ. ಪತ್ನೀ ಧರ್ಮ ಪ್ರಕಾರ ನಾನೂ ಪತಿಯಭೃತ್ಯಳೇ. ಇವರ ಕಷ್ಟ ಕಾಲದ ಪ್ರಯಾಣದಲ್ಲಿ ಇವರು ತಿಂದುಂಡ ಖಾಲೀ ಎಲೆಗಳನ್ನು ನೋಡಿಯೇ ನನ್ನ ಹೊಟ್ಟೆ ತುಂಬಿದೆ. ರಾಣಿಯ ಅಧಿಕಾರ ಸ್ವಾತಂತ್ರ್ಯವನ್ನು ಕಂಡವಳಲ್ಲ ಸ್ವಾಮಿ" ಎಂದಳು.

ಅದನ್ನು ಕೇಳಿ ರಾಜನ ಮುಖವು ಕಪ್ಪಿಟ್ಟಿತು. ಆಗ ಬೋಧಿಸತ್ವನು ರಾಣಿಯನ್ನು ನೋಡಿ, "ತಾಯೀ ಮಹಾರಾಜರಿಗೆ ನಿನ್ನ ಮೇಲೆ ಇಷ್ಟವಿಲ್ಲವೆಂದೂ ಅದನ್ನು ನಿನ್ನ ಮುಂದೆ ಹೇಳಲು ಶಂಕಿಸುವರೆಂದೂ ಅರ್ಥವಾಯಿತು, ಹಿರಿಯರ ಮಾತೊಂದಿದೆ.

'ಚಜೇ ಚಜಂತಂ ವಣ್ಥಂ ನಕಯಿರಾ
ಅಪೇತ ಚಿತ್ತೇನ ನ ಸಂಭಜೇಯ್ಯ
ದ್ವಿಜೋ ದುಮಂ ಖೀಣ ಫಲಂತಿ ಞತ್ವಾ
ಅಂಞಂ ಸಮೇಕ್ಖೇಯ್ಯ ಮಹಾಹಿ ಲೋಕೇ'

(ಅಂದರೆ ಬಿಡುವವನನ್ನು ಬಿಡು, ಅಂಥವನ ಸ್ನೇಹದ ಆಶೆಬೇಡ. ಅಪೇಕ್ಷೆ ಇಲ್ಲದವನನ್ನು ಆದರಿಸಬೇಡ. ಪಕ್ಷಿ ಫಲಗಳಿಲ್ಲದ ಮರವನ್ನು ಬಿಟ್ಟು ಬೇರೆ ಮರಗಳನ್ನು ನೋಡಿಕೊಳ್ಳುತ್ತದೆ. ಲೋಕವು ವಿಶಾಲವಾದುದು.)

ಇದನ್ನು ಕೇಳಿದ ಕೂಡಲೇ ರಾಜನು ಸಿಂಹಾಸನದಿಂದಿಳಿದು ಬೋಧಿಸತ್ವನ ಕಾಲಿಗೆ ಬಿದ್ದು, "ಪಂಡಿತಾಮಾತ್ಯರೇ! ನನ್ನ ತಪ್ಪು ಕ್ಷಮಿಸಿರಿ. ನನ್ನ ಮರ್ಯಾದೆ ಕಾಪಾಡಿರಿ. ನಡೆದುದೇನೋ ನಡೆದುಹೋಯಿತು. ಇನ್ನು ನನ್ನ ಪತ್ನಿಯನ್ನು ಧರ್ಮದಿಂದ ನಡೆಯಿಸಿಕೊಳ್ಳುತ್ತೇನೆ" ಎಂದು ಕ್ಷಮೆ ಕೇಳುವಾಗ, ಅವನ ಕಣ್ಣುಗಳಿಂದ ನೀರಿಳಿಯಿತು. ಅಂದಿನಿಂದ ರಾಜನು ರಾಣಿಯನ್ನು ಅತ್ಯಾದರದಿಂದ ನೋಡಿಕೊಳ್ಳುತ್ತಿದ್ದನು.






# ಪೃಥ್ವೀರಾಜ ಮತ್ತು ಸಂಯುಕ್ತೆ–೧

ಹನ್ನೊಂದನೇ ಶತಮಾನದಲ್ಲಿ ಉತ್ತರ ಭಾರತ ದೇಶವನ್ನು ಮುಖ್ಯವಾದ ನಾಲ್ಕು ಹಿಂದೂ ರಾಜ ಕುಟುಂಬಗಳು ಪಾಲಿಸಿಕೊಂಡಿದ್ದುವು. ಢಿಲ್ಲಿ, ಗುಜರಾತ್, ಅಜ್ಮೀರ್, ಕನೋಜ್ ಎಂಬವು ರಾಜಧಾನೀನಗರಗಳಾಗಿ, ಸಾಂಸ್ಕೃತಿಕ, ವ್ಯಾಪಾರ ರಂಗಗಳಲ್ಲಿ ಉಚ್ಚಸ್ಥಿತಿಗೆ ಮುಟ್ಟಿದ್ದುವು.

ಪ್ರತಿಭಾವಂತನಾದ ಪೃಥ್ವೀರಾಜನು ಢಿಲ್ಲಿಯ ಪಾಲಕನಾಗಿದ್ದನು. ಅಜ್ಮೀರ್ ರಾಜನು ಪೃಥ್ವೀರಾಜನ ಮಾತಾಮಹನಾಗಿದ್ದ. ಆತನಿಗೆ ಮಕ್ಕಳಿಲ್ಲದ್ದರಿಂದ, ತನ್ನ ಅನಂತರ ರಾಜ್ಯಕ್ಕೆ ಪೃಥ್ವೀರಾಜನೇ ವಾರಸನಾಗಿರಬೇಕೆಂದು ಏರ್ಪಡಿಸಿ, ಮರಣಶಯ್ಯೆಯಲ್ಲಿ ಅವನನ್ನು ಆಶೀರ್ವದಿಸಿದನು.





ಕನೋಜದ ರಾಜನಾದ ಜಯಚಂದ್ರನು ಪೃಥ್ವೀರಾಜನ ಸೋದರಿಯ ಗಂಡ. ಅವನಿಗೆ ಅಜ್ಮೀರ್ ರಾಜ್ಯವನ್ನು ತನ್ನದಾಗಿ ಮಾಡಿಕೊಳ್ಳಬೇಕೆಂದು ಆಶೆ. ಆದರೆ ಪೃಥ್ವೀರಾಜನು ಮಹಾವೀರನೆಂಬ ಸಂಗತಿ ಗೊತ್ತಿರುವುದರಿಂದ ಏನೂ ಮಾಡದೆ ಸುಮ್ಮನಿದ್ದನು.



ಆನಂದೋತ್ಸಾಹಗಳಿಂದ ಅತಿ ವೈಭವದಲ್ಲಿ ಪೃಥ್ವೀರಾಜನಿಗೆ ಪಟ್ಟಾಭಿಷೇಕವಾಯಿತು. ಈಗ ಅವನು ವಿಸ್ತಾರವಾದ ಢಿಲ್ಲಿಗೂ ಅಜ್ಮೀರಿಗೂ ರಾಜ. ತನ್ನ ಸಾಮರ್ಥ್ಯದಿಂದ ಎಲ್ಲರೂ ಮೆಚ್ಚುವ ಹಾಗೆ ರಾಜ್ಯಭಾರ ಮಾಡ ತೊಡಗಿದನು.

ಅಫ್‌ಘನಿಸ್ತಾನದ ಗೋರೀ ಪ್ರಾಂತವನ್ನು ಆಳಿ ಕೊಂಡಿದ್ದ ಗೋರೀ ಮಹ್ಮದ್, ಢಿಲ್ಲಿಯನ್ನು ವಶಪಡಿಸಿ ಕೊಳ್ಳಬೇಕೆಂದು ಪ್ರಬಲ ಇಚ್ಛೆ ಯುಳ್ಳವನಾಗಿದ್ದನು. ಅವನು ಆರುಸಾರಿ ಢಿಲ್ಲಿಯ ಮೇಲೆ ದಂಡೆತ್ತಿ ಬಂದು, ಪ್ರತಿಸಾರಿಯೂ ಪೃಥ್ವೀರಾಜನ ಕೈಯಲ್ಲಿ ಪೂರ್ತಿ ಸೋತು ಓಡಿದ್ದನು. ಗೋರಿಯನ್ನು ಇದಿರಿಸುವಾಗ ಪೃಥ್ವೀರಾಜನಿಗೆ ಜಯಚಂದ್ರನ ಹೊರತು ಉಳಿದ ರಾಜಪುತ್ರ ರಾಜರೆಲ್ಲಾ ಸಹಾಯ ಮಾಡಿದ್ದರು.





ಒಂದುಸಾರಿ ಗೋರೀಮಹ್ಮದ್ ಪೃಥ್ವೀರಾಜನ ಕೈಗೆ ಬಂದಿಯಾಗಿ ಸಿಕ್ಕಿದಾಗ, ಪೃಥ್ವೀರಾಜನ ಸೇನಾನಾಯಕರು ಕೆಲವರು ಅವನಿಗೆ ಹೆಣ್ಣು ವೇಷ ಹಾಕಿಸಿ ಮೇನೆಯಲ್ಲಿ ಕೂಡಿಸಿ ಹಿಂದೆ ಕಳುಹಿಸಬೇಕೆಂದು ನೋಡಿದರು. ಹೀಗೆ ಗೋರಿ ಮಹ್ಮದನಿಗೆ ತುಂಬಾ ಅವಮಾನವಾಗಿತ್ತು.

ಪೃಥ್ವೀರಾಜನು ಅವನನ್ನು ಬಂಧವಮುಕ್ತವಮಾಡಿ ಇನ್ನೆಂದೂ ಇಂತಹ ದಾಳಿ ಮಾಡಬೇಡ ವೆಂದು ಒತ್ತಿ ಎಚ್ಚರಿಕೆಕೊಟ್ಟು ಕಳುಹಿಸಿದನು. ತಾನು ಕೊಲ್ಲಲ್ಪಡಬೇಕಾದ ಶತ್ರುವಾದರೂ ಕರುಣಿಸಿ ಬಿಟ್ಟುದಕ್ಕೆ ಗೋರೀಮಹ್ಮದ್ ಪೃಥ್ವೀರಾಜನಿಗೆ ತನ್ನ ಕೃತಜ್ಞತೆಯನ್ನು ಹೇಳಿಕೊಂಡನು.





ಕನೋಜದ ರಾಜನಾದ ಜಯಚಂದ್ರನಿಗೆ ಸಂಯುಕ್ತೆ ಎಂಬ ಕುಮಾರಿ ಇದ್ದಳು. ಅವಳು ಅಪೂರ್ವ ಸುಂದರಿಯಾಗಿದ್ದುದು ಮಾತ್ರವಲ್ಲದೆ, ಒಳ್ಳೆಯ ವಿದ್ಯಾವಂತಳಾಗಿಯೂ ಇದ್ದಳು. ದೇಶದಲ್ಲಿ ಅವಳನ್ನು ಕುರಿತು ತಿಳಿಯದ ರಾಜಕುಟುಂಬವೇ ಇರಲಿಲ್ಲ.

ಜಯಚಂದ್ರನು ಅವಳಿಗೆ ಸ್ವಯಂವರ ಮಾಡಬೇಕೆಂದು, ಪ್ರಕಟಪಡಿಸಿದನು. ಅದಕ್ಕಾಗಿ ಅವನು ಪೃಥ್ವೀರಾಜನಿಗೆ ಹೊರತು, ವಿವಾಹ ಯೋಗ್ಯರಾದ ಅನೇಕಮಂದಿ ರಾಜಕುಮಾರರಿಗೆ ಆಮಂತ್ರಣ ಕಳುಹಿಸಿದನು. ಪೃಥ್ವೀರಾಜನು ಅನೇಕ ವರ್ಷಗಳ ಹಿಂದೆ ಅಜ್ಮೀರಿನ ರಾಜ ಸೌಧದಲ್ಲಿ ಸಂಯುಕ್ತೆಯನ್ನು ನೋಡಿದ್ದನು. ಅಂದಿನಿಂದ ಅವನು ಅವಳನ್ನು ಮರೆಯಲಿಲ್ಲ.





ಸಂಯುಕ್ತೆಯ ಸ್ವಯಂವರಕ್ಕೆ ಎಲ್ಲ ಏರ್ಪಾಡುಗಳೂ ಪೂರ್ತಿಯಾದ ಸಮಯದಲ್ಲಿ ಅಕಸ್ಮಾತ್ತಾಗಿ ಸರಹದ್ದು ಪ್ರದೇಶದಲ್ಲಿ ಯುದ್ಧದ ಅಪಾಯವು ಸಂಭವಿಸಿತು. ಆಗ ಕೆಲವುಮಂದಿ ರಾಜಕುಮಾರರು ಕೇಳಿಕೊಂಡಂತೆ, ಜಯಚಂದ್ರನು ಕುಮಾರಿಯ ಸ್ವಯಂವರವನ್ನು ತಾತ್ಕಾಲಿಕವಾಗಿ ನಿಲ್ಲಿಸಿದನು. ಆ ಸಂಗತಿಯನ್ನು ನಗರವಾಸಿಗಳಿಗೆ ಡಂಗುರದ ಮೂಲಕವೂ, ಹೊರಗಿನ ಆಹ್ವಾನಿತರಿಗೆ ವಾರ್ತಾ ವಾಹಕರ ಮೂಲಕವೂ ತಿಳಿಯ ಪಡಿಸಿದನು.

ತನ್ನನ್ನು ಸ್ವಯಂವರಕ್ಕೆ ಆಹ್ವಾನಿಸದಿದ್ದುದನ್ನು ನೋಡಿ, ಜಯಚಂದ್ರನ ಮೇಲೆ ಪೃಥ್ವೀರಾಜನಿಗೆ ಬಹಳ ಕೋಪಬಂದಿತು. ಅವನು ತನ್ನ ವಿಶ್ವಾಸದ ವೃದ್ಧದಾಸಿಯೊಂದಿಗೆ ಸಂಯುಕ್ತೆಯ ಮೇಲೆ ತನಗಿರುವ ಪ್ರೇಮವನ್ನು ಕುರಿತು ಹೇಳಿದನು.





ಆ ದಾಸಿ, ಸಂಯುಕ್ತೆಗೆ ಪೃಥ್ವೀರಾಜನ ಮೇಲೆ ಆದರ ಭಾವನೆಗಳು ಬರುವ ಹಾಗೆ ಸಹಾಯ ಮಾಡುವೆನೆಂದು ಮಾತುಕೊಟ್ಟಳು. ಆ ಸಮಯಕ್ಕೆ ವರ್ತಕರ ಗುಂಪೊಂದು ಅಜ್ಮೀರಿಗೆ ಪ್ರಯಾಣ ಮಾಡುತ್ತಿದ್ದಿತು. ವೃದ್ಧ ದಾಸಿ ಆ ಪ್ರಯಾಣಿಕರೊಂದಿಗೆ ಸೇರಿ ಹೊರಟಳು.

(ಸಶೇಷ)



# ದೊಡ್ಡವರೊಂದಿಗೆಕೆಲಸ

ಒಂದು ಊರಿನಲ್ಲಿ ಚಂದ್ರಣ್ಣನೆಂಬ ಯುವಕನಿದ್ದ. ಅವನು ತನ್ನ ಇಪ್ಪತ್ತನೆಯ ವಯಸ್ಸಿನಲ್ಲಿಯೇ ತಂದೆಯನ್ನು ಕಳೆದುಕೊಂಡು ಎಲ್ಲಾ ಭಾರವನ್ನೂ ವಹಿಸಿಕೊಳ್ಳ ಬೇಕಾಯಿತು. ತಂದೆ ಬಿಟ್ಟು ಹೋದ ಮುಖ್ಯ ಆಸ್ತಿ ಎಂದರೆ ಎರಡು ಎಕರೆಯಷ್ಟು ಗದ್ದೆಗಳು, ಮನೆ ಮತ್ತು ಮೂವತ್ತು ಸಾವಿರ ರೂಪಾಯಿ ನಗದು ಹಣ. ಇದು ತಂದೆ ಯಾರಿಗೋ ಕೊಟ್ಟಸಾಲ ಹಿಂದಿರುಗಿ ಬಂದ ಹಣವಾಗಿತ್ತು. ಇಷ್ಟು ಹಣವನ್ನು ಮನೆಯಲ್ಲೇ ಇಟ್ಟುಕೊಂಡಿದ್ದರೆ, ಅಗತ್ಯವಿಲ್ಲದ ಖರ್ಚುಗಳೆಲ್ಲಾ ತೋರುತ್ತವೆ. ಆದು ದರಿಂದ ಅದನ್ನು ಬಡ್ಡಿಗೆ ಕೊಡುವುದು ಒಳ್ಳೆಯ ದೆಂದು ಚಂದ್ರಣ್ಣನಿಗೆ ತೋರಿತು.

ಈ ಸಂಗತಿಯನ್ನು ಅವನು ಮಿತ್ರರೊಂದಿಗೆ ಹೇಳಿದನು. ಈ ಸಮಾಚಾರ ಗಂಗರಾಜನೆಂಬ ಹೆಸರು ವಾಸಿಯಾದ ವೈದ್ಯನಿಗೆ ಗೊತ್ತಾಯಿತು. ಅವನು ಚಂದ್ರಣ್ಣನನ್ನು ತನ್ನ ಬಳಿಗೆ ಕರೆಯಿಸಿ, "ನೋಡು ಚಂದ್ರಣ್ಣಾ, ಈ ಹಳೇ ಮನೆ ಇಲ್ಲಿಗೆ ಬರುವವರಿಗೆ ಏನೇನೂ ಸಾಕಾಗುವುದಿಲ್ಲ. ಹೊಸದಾಗಿ ವೈದ್ಯ ಶಾಲೆಯನ್ನೇ ಕಟ್ಟಿಸ ಬೇಕೆಂದಿದ್ದೇನೆ. ನನಗೆ ಹತ್ತು ಸಾವಿರ ರೂಪಾಯಿಗಳನ್ನು ಸಾಲವಾಗಿ ಕೊಡುವಿ ಯಾದರೆ ತಿಂಗಳು ತಪ್ಪದೆ ಬಡ್ಡಿ ಕೊಡುತ್ತಾ ಬರುತ್ತೇನೆ. ಹಣ ಸೇರಿದಕೂಡಲೇ ಪೂರ್ತಿ ಸಾಲ ಚುಕ್ತಾ ಮಾಡಿಬಿಡುತ್ತೇನೆ" ಎಂದನು.

ವೈದ್ಯ ಗಂಗರಾಜನಿಗೆ ಒಳ್ಳೆಯ ಆದಾಯ ಬರುವು ದರಿಂದ ತನ್ನ ಹಣಕ್ಕೆ ಭದ್ರತೆ ಇರುವುದೆಂದುಕೊಂಡು ಚಂದ್ರಣ್ಣನು, ಅವನಿಗೆ ಹತ್ತು ಸಾವಿರ ಕೊಟ್ಟು, ಪತ್ರ ಬರೆಯಿಸಿ ತೆಗೆದುಕೊಂಡನು.

ಇದು ನಡೆದ ಹತ್ತು ದಿನಗಳ ಮೇಲೆ, ಆ ಊರಿನ ದೊಡ್ಡ ಮನುಷ್ಯರಲ್ಲೊಬ್ಬರಾಗಿ ದೊಡ್ಡ ದೊಡ್ಡ ವ್ಯವಹಾರಗಳನ್ನಿಟ್ಟುಕೊಂಡ ಸೋಮಶೇಖರರು, ಆಳಿನ ಮೂಲಕ "ಚಂದ್ರಣ್ಣಾ, ನಾನು ಎಂಥವನೆಂದು ನಿನಗೇನೂ ಹೇಳಬೇಕಾಗಿಲ್ಲ ಈ ನಡುವೆ ನನ್ನ ಮಗಳ ಮದುವೆ ಮಾಡಿದ ಮೇಲೆ, ಹಣಕ್ಕೆ ಸ್ವಲ್ಪ ತೊಂದರೆ ಯಾಗಿದೆ. ಒಂದು ಐದು ಸಾವಿರ ಸಾಲವಾಗಿ ಕೊಟ್ಟರೆ ಸಾಕು. ಪ್ರತಿ ತಿಂಗಳೂ ಬಡ್ಡಿ ತೆಗೆದುಕೋ. ಬೇಗದಲ್ಲೇ ಅಸಲೂ ಹಿಂದಿರುಗಿಸಿಬಿಡುತ್ತೇನೆ" ಎಂದರು.

ಚಂದ್ರಣ್ಣನು ಅವರು ಕೇಳಿದ ಮೊತ್ತವನ್ನು ಕೊಟ್ಟು ಪತ್ರವನ್ನೂ ಬರೆಯಿಸಿ ತೆಗೆದುಕೊಂಡನು

ಆರ್. ಎಸ್. ನಾರಾಯಣಮೂರ್ತಿ

ಆದಾದ ಮೇಲೆ ಮತ್ತೊಂದು ವಾರ ದಿನಗಳಲ್ಲಿ ಆ ಊರಿನ ಬಹು ದೊಡ್ಡ ರೈತನಾದ ಕುದುರಪ್ಪನು ಚಂದ್ರಣ್ಣನ ಮನೆಗೆ ಬಂದು, "ಚಂದ್ರಣ್ಣಯ್ಯಾ, ನನ್ನಂಥ ಭೂಮಾಲಿಕನಾದವನು ಸಾಲ ಕೇಳಲು ಬರುವುದೇನೆಂದು ಆಶ್ಚರ್ಯಪಡಬೇಡಿ. ಹೊಸದಾಗಿ ಎರಡು ಗದ್ದೆಗಳನ್ನು ಕೊಂಡುಕೊಳ್ಳಲು ಐದು ಸಾವಿರ ಕಡಿಮೆ ಬಿದ್ದಿದೆ. ಅಷ್ಟನ್ನು ನೀವು ಸಾಲ ಕೊಟ್ಟರೆ ತಿಂಗ ತಿಂಗಳೂ ಬಡ್ಡಿ ತಂದು ಕೊಡುತ್ತೇನೆ. ಒಂದು ವರ್ಷ ದೊಳಗೆ ಅಸಲೂ ತಂದು ಕೊಡುತ್ತೇನೆ" ಎಂದನು.

ಚಂದ್ರಣ್ಣನು ಅವನಿಗೂ ಹಣ ಕೊಟ್ಟು ತಕ್ಕ ಪತ್ರ ಬರೆಯಿಸಿ ತೆಗೆದುಕೊಂಡನು. ಮುಂದೆ ಆರು ತಿಂಗಳು ಕಳೆಯಿತು. ಗಂಗರಾಜ ವೈದ್ಯನೂ, ಊರ ದೊಡ್ಡ ಮನುಷ್ಯರಾದ ಸೋಮಶೇಖರರೂ, ರೈತ ಕುದುರಪ್ಪನೂ ತಿಂಗಳು ತಿಂಗಳೂ ತಪ್ಪದೆ ಬಡ್ಡಿ ಹಣ ತಂದು ಕೊಡುತ್ತಾ ಇದ್ದರು.

ಆಮೇಲಿನ ತಿಂಗಳುಗಳು ಕ್ರಮಿಸಿದಂತೆ ಸಾಲ ತೆಗೆದುಕೊಂಡ ಮೂವರೂ ಬಡ್ಡಿ ಕೊಡುವುದನ್ನು ನಿಲ್ಲಿಸಿದರು. ಎರಡು ಮೂರು ತಿಂಗಳಿಗೊಮ್ಮೆ ತುಂಡು ತುಂಡಾಗಿ ಬರತೊಡಗಿತು. ಮತ್ತೆ ಮತ್ತೆ ಅದೂ ನಿಲ್ಲ ತೊಡಗಿತು. ಚಂದ್ರಣ್ಣನು ಕೇಳಲು ಹೋದರೆ, ಅವನು ಬಾಯಿಯೆತ್ತುವ ಮೊದಲೇ "ಗೊತ್ತಿದೆ, ಗೊತ್ತಿದೆ. ಮನೆಗೇ ಕಳುಹಿಸುತ್ತೇವೆ" ಎನ್ನುತ್ತಿದ್ದರು. ಅಥವಾ ಬೇರೆಯವರೊಡನೆ ಮಾತಾಡುತ್ತಿದ್ದವರು, ಸನ್ನೆಯಿಂದಲೇ ಕಳುಹಿಸುವೆವೆಂದು ಸೂಚಿಸುವಾಗ, ಇನ್ನೊಬ್ಬರ ಇದಿರಿನಲ್ಲಿ ದೊಡ್ಡವರ ಹತ್ತಿರ ಕೇಳಲಿಕ್ಕಾಗುತ್ತೆಯೆ ?

ಚಂದ್ರಣ್ಣನ ಹತ್ತಿರ ತಂದೆ ಬಿಟ್ಟು ಹೋದ ಹಣದಲ್ಲಿ ಹತ್ತು ಸಾವಿರ ಉಳಿದಿತ್ತು. ಬಡ್ಡಿಗೆ ಹಣ ಕೊಡುವುದರಿಂದಾಗುವ ಉಪದ್ರವನ್ನು ತಿಳಿದು ಕೊಂಡ ಚಂದ್ರಣ್ಣನು, ಐದು ಸಾವಿರ ಹಣಕ್ಕೆ ತನಗೆ ಲಗ್ತಿಯಾಗಿದ್ದ ಒಂದು ತೋಟವನ್ನು ಕೊಂಡು ಕೊಂಡನು. ಬಹ್ವಂಶ ಒಣಕಲು ನೆಲವಾದ ಅದನ್ನು ಹಸನು ಮಾಡಿ, ಬಾವಿ ತೋಡಿಸಿ ಎಲ್ಲಾ ಮಾಡುವಾಗ ಮೇಲೆ ಮೂರು ಸಾವಿರ ಖರ್ಚಾಯಿತು. ಕೊಟ್ಟ



ಸಾಲಗಳಿಗೆ ಬಡ್ಡಿ ಸರಿಯಾಗಿ ಬಾರದೆ ಹೋದುದರಿಂದ, ಉಳಿದ ಐದು ಸಾವಿರದಲ್ಲಿ ಮನೆ ಖರ್ಚುಗಳಿಗೇ ಒಂದು ಸಾವಿರದಷ್ಟು ಖರ್ಚಾಗಿ ಹೋಯಿತು. ಇನ್ನು ಆವನದಾಗಿ ಉಳಿದಿರುವ ಹಣ ಕೇವಲ ಒಂದು ಸಾವಿರ ಮಾತ್ರವೇ.

ಪರಿಸ್ಥಿತಿ ಹೀಗಾದುದನ್ನು ನೋಡಿ ಚಂದ್ರಣ್ಣನಿಗೆ ಚಿಂತೆ ಹಿಡಿಯಿತು. ಕಡೆಗೆ ತನ್ನ ಕೈಯಿಂದ ಸಾಲ ತೆಗೆದುಕೊಂಡವರನ್ನು ನೋಡಿ, ಪ್ರತಿ ತಿಂಗಳೂ ಬಡ್ಡಿ ಕೊಡದಿದ್ದರೆ ಹೋಗಲಿ, ಅಸಲು ಮೊತ್ತವಾದರೂ ತೀರಿಸಿಬಿಡುವಂತೆ ಪ್ರಾರ್ಥಿಸಿಕೊಂಡನು.

"ಹೇಗೂ ಸಾಲ ತೆಗೆದುಕೊಂಡದ್ದಕ್ಕಿಂತ ಹೆಚ್ಚೇ ವೈದ್ಯಶಾಲೆ ನುಂಗಿಬಿಟ್ಟಿತು. ಮನೆಯಲ್ಲಿದ್ದ ನಗಗಳನ್ನು ಮಾರಬೇಕೆಂದಿದ್ದೇನೆ. ಕೂಡಲೇ ಬಡ್ಡೀ ಅಸಲೂ ಎಲ್ಲಾ ಕೊಡುತ್ತೇನೆ" ಎಂದನು ವೈದ್ಯಗಂಗರಾಜ.

"ಅದಕ್ಕಾಗಿ ಇಷ್ಟು ಕೇಳಿಕೊಳ್ಳಬೇಕೆ ? ನನಗೆ ಗೊತ್ತಿಲ್ಲವೇ ? ರಾಂಪುರದಲ್ಲಿರುವ ನಮ್ಮ ತಾತನ ಕಾಲದ ಮನೆಯನ್ನು ಮಾರಲಿಕ್ಕೆ ಇಟ್ಟಿದ್ದೇನೆ. ಅದು ಬಂದಕೂಡಲೇ ನಿನ್ನ ಲೆಕ್ಕ ಪೂರ್ತಿ ಮುಗಿಸುತ್ತೇನಪ್ಪ" ಎಂದರು ಸೋಮಶೇಖರರು.

"ನಮ್ಮ ಕೆರೆಯ ಮೇಲಿನ ಬೆಟ್ಟು ಗದ್ದೆಗಳೆರಡನ್ನು ಮಾರಲಿಕ್ಕಿದ್ದೇನೆ. ಎರಡು ಮೂರು ಜನರು ಕೇಳುತ್ತಾರೆ. ಆ ವ್ಯವಹಾರ ಮುಗಿದ ಕೂಡಲೇ ಮೊದಲು ನಿಮಗೇ ಕೊಟ್ಟುಬಿಡುತ್ತೇನೆ ಚಂದ್ರಣ್ಣನವರೆ !" ಎಂದನು ದೊಡ್ಡ ರೈತ ಕುದುರಪ್ಪ.

ಒಂದು ತಿಂಗಳು ಕಳೆದರೂ ಆ ಮೂವರಿಂದಲೂ ಯಾವ ಹಣವೂ ಬಾರದೆ ಹೋದುದನ್ನು ನೋಡಿ, ಚಂದ್ರಣ್ಣನು ಮಿತ್ರರೊಂದಿಗೆ ಹೇಳಿಕೊಂಡನು. ಈ ಸಂಗತಿ ಊರವರಿಗೂ ತಿಳಿಯಿತು. ವೈದ್ಯರೊಂದಿಗೆ ಅನೇಕರಿಗೆ ದಾಕ್ಷಿಣ್ಯವಿದೆ. ಮತ್ತೆ ಕೆಲವರಿಗೆ ಸೋಮಶೇಖರನೊಂದಿಗೆ ವ್ಯವಹಾರಗಳಿವೆ. ಉಳಿದವರಿಗೆ ಕುದುರಪ್ಪನೆಂದರೆ ಭಯ.

ಮಿತ್ರರೇ ಮೊದಲಾದವರು ಚಂದ್ರಣ್ಣನೊಂದಿಗೆ, "ದೊಡ್ಡವರೊಂದಿಗೆ ಕೆಲಸವೆಂದರೆ ಹೀಗೇ ಇರುತ್ತದೆ. ಅವರು ಬರೆದು ಕೊಟ್ಟ ಪತ್ರಗಳಿದ್ದರೂ



ನ್ಯಾಯಾಸ್ಥಾನಕ್ಕೆ ಹೋಗಲು ಸಾಧ್ಯವೆ? ಅವರ ಕೋಪವೂ ದೊಡ್ಡದೇ. ಏನು ಮಾಡಲು ಸಾಧ್ಯ ಏದೆ?" ಎಂದು ಅನುತಾಪ ತೋರಿಸಿದರು.

ಮುಂದೆ ಎಂಟು ದಿನಗಳಲ್ಲಿ, ಒಂದು ದಿನ ಬೆಳಿಗ್ಗೆ ಚಂದ್ರಣ್ಣನ ಹೆಂಡತಿಯೂ, ಮುದುಕಿ ತಾಯಿಯೂ ಮನೆಯ ಬಾಗಿಲಲ್ಲಿ ಕುಳಿತುಕೊಂಡು ಯಾಕೋ ದುಃಖಪಡುವುದನ್ನು ನೋಡಿ ಅನೇಕಮಂದಿ ಅಲ್ಲಿ ಕೂಡಿದರು.ಅವರಲ್ಲಿ ಒಬ್ಬನು ಚಂದ್ರಣ್ಣನ ಹೆಂಡತಿಯ ಕೈಯಲ್ಲಿರುವ ಕಾಗದವನ್ನು ನೋಡಿದನು. ಅದನ್ನು ತೆಗೆದುಕೊಂಡು ಓದಿದನು. ಅದರಲ್ಲಿ ಚಂದ್ರಣ್ಣನಿಂದ ಹೀಗೆ ಬರೆಯಲ್ಪಟ್ಟಿತ್ತು : "ನಾನು ಇಂತಿಂಥವರಿಗೆ ಇಷ್ಟಿಷ್ಟು ಮೊತ್ತವನ್ನು ಸಾಲವಾಗಿ ಕೊಟ್ಟಿದ್ದೆನು. ಬಡ್ಡಿಯ ಮಾತು ಭಗವಂತನಿಗೇ ಗೊತ್ತು. ಅಸಲು ಕೂಡಾ ಅವರು ಕೊಡುವ ಹಾಗೆ ಇಲ್ಲ. ನನ್ನ ಹತ್ತಿರ ಇರುವ ಅಲ್ಪಸ್ವಲ್ಪದಿಂದ ಯಾವ ಕೆಲಸವನ್ನೂ ಮಾಡಲಾಗದೆ, ಮನಸ್ಸಿಗೆ ಬೇಸರವಾಗಿ ವೈರಾಗ್ಯಬಂದಿತು. ಆದ್ದರಿಂದಲೇ ನಾನು ಸನ್ಯಾಸಿ ಯಾಗಿ ಸನ್ಯಾಸಿಗಳ ಜತೆಯಲ್ಲಿ ಕೂಡಿ ಹೋಗಿದ್ದೇನೆ. ನಿಮ್ಮನ್ನು ದೇವರೇ ಕಾಪಾಡಲಿ."

ಈ ಸಂಗತಿ ಅಲ್ಲಿ ಕೂಡಿದ ಎಲ್ಲರಿಗೂ ತಿಳಿಯಿತು. ಹೆಂಡತಿ ಮಕ್ಕಳನ್ನು ಬಿಟ್ಟು ಅವನು ಹಾಗೆ ಹೋಗ ಬೇಕಾದರೆ ಅವನಿಗೆ ಎಷ್ಟು ಬೇಸರವಾಗಿರಬೇಡ! ಅಲ್ಲಿ ಕೂಡಿದವರೆಲ್ಲಾ ವೈದ್ಯ ಗಂಗರಾಜನನ್ನೂ ಸೋಮಶೇಖರರನ್ನೂ, ರೈತ ಕುದುರಪ್ಪನನ್ನೂ ನಾನಾವಿಧವಾಗಿ ಬೈಯುತ್ತ ಮಾತಾಡಿಕೊಂಡರು. ದಾರಿ ಕೇರಿಗಳಲ್ಲಿ ಬೈದಾಡಲು ಜನರ ಬಾಯಿಗೆ ಯಾರ ಹಂಗೂ ಇಲ್ಲವಷ್ಟೆ?

ಗಾಳಿಗೆ ಸೇರಿದ ವಾರ್ತೆ ಹರಡಲು ತಡವೇ ನಿಲ್ಲ, ಆ ಮೂವರು ದೊಡ್ಡ ಮನುಷ್ಯರಿಗೂ ಈ ಸಮಾಚಾರ ತಿಳಿಯಿತು. ಊರೊಳಗೆ ತಮ್ಮ ಮರ್ಯಾದೆ ಕಾಪಾಡಿಕೊಳ್ಳಲು ಬೇರೆ ದಾರಿ ಇರಲಿಲ್ಲ. ಅವರು ಆ ದಿನ ಸಾಯಂಕಾಲವೇ ಚಂದ್ರಣ್ಣನ ಮನೆಗೆ ಬಂದು ಬಡ್ಡಿಯೊಂದಿಗೆ ಅಸಲು ಕೂಡ ಚಂದ್ರಣ್ಣನ ಹೆಂಡತಿಗೆ ಕೊಟ್ಟು, ತಾವು ಬರೆದ ಸಾಲದ ಪತ್ರ ಗಳನ್ನು ತೆಗೆದುಕೊಂಡು ಹೋದರು.

ಮತ್ತೊಂದು ವಾರದ ಮೇಲೆ, ಚಂದ್ರಣ್ಣನು ಚಿಕ್ಕಚಿಕ್ಕ ಗಡ್ಡಮೀಸೆಗಳೊಂದಿಗೆ ಸನ್ಯಾಸಿಗಳೊಂದಿ ಗಿರುವುದನ್ನು ಊರಿನವರು ನೋಡಿ ಗುರುತಿಸಿ ನಿಂದಿಸಿದರು. ಆಗ ಚಂದ್ರಣ್ಣ,

"ಮತ್ತೇನು ಮಾಡಲಿ? ನಾನು ಸನ್ಯಾಸಿಯಾದ ಮೇಲೆ ತಾನೇ ದೇವರು ನಮ್ಮೂರಿನ ದೊಡ್ಡ ಮನುಷ್ಯರಿಗೆ ಸಾಲ ತೀರಿಸುವಂಥ ಬುದ್ಧಿ ಬರುವಂತೆ ಮಾಡಿದ್ದಾನೆ?" ಎಂದು ಮೀಸೆಯೊಳಗೇ ನಕ್ಕು, ಮನೆಯದಾರಿ ಹಿಡಿದನು.



# ರಾಜನ ತರ್ಕ

ವಿಮಲನೆಂಬ ಸೇನಾನಾಯಕನು ತನ್ನ ಕುಮಾರನಿಗೂ, ಅಳಿಯನಿಗೂ, ರಾಜನ ಆಸ್ಥಾನದಲ್ಲಿ ಉದ್ಯೋಗ ದೊರೆಯುವಂತೆ ಮಾಡಿದನು.

ಒಂದೇ ಕುಟುಂಬದವರಿಬ್ಬರಿಗೆ ರಾಜನು ಹೀಗೆ ಉದ್ಯೋಗಗಳನ್ನು ಕೊಡುವುದು ಚೆನ್ನಾಗಿಲ್ಲವೆಂದು ಕೆಲವರು ಮರೆಯಲ್ಲಿ ವಿಮರ್ಶಿಸಿಕೊಂಡಿದ್ದರು.

ಈ ಸಂಗತಿ ರಾಜನಿಗೆ ಗೊತ್ತಾಯಿತು.

ಕೆಲವು ದಿನಗಳ ಮೇಲೆ ವಿಮಲನು ಮತ್ತೊಬ್ಬ ಯುವಕನನ್ನು ರಾಜನ ಬಳಿಗೆ ಕರೆದುಕೊಂಡು ಹೋಗಿ, "ಪ್ರಭೂ, ಆನಂದನೆಂಬ ಇವನು ನನ್ನ ಸೋದರಳಿಯ. ಇವನ ಮುತ್ತಾತ ಅವಂತಿ ಯುದ್ಧದಲ್ಲಿಯೂ, ತಾತ ಕಳಿಂಗ ಯುದ್ಧದಲ್ಲಿಯೂ, ತಂದೆ ಮಹಾರಾಷ್ಟ್ರ ಯುದ್ಧದಲ್ಲಿಯೂ ಕ್ರಮವಾಗಿ ನಿಮ್ಮ ಮುತ್ತಾತ, ತಾತ, ತಂದೆಯರ ಹತ್ತಿರ ಸೇವೆ ಮಾಡಿ ಧನ್ಯರಾದರು. ನಿಮ್ಮ ತಲೆಮಾರಿನಲ್ಲಿ ಕೂಡಾ..." ಎಂದು ಮಾತು ನಿಲ್ಲಿಸಿ ಹಲ್ಲು ಕಿರಿದು ಕೈ ಜೋಡಿಸಿದನು.

ಸಂಗತಿ ಅರ್ಥಮಾಡಿಕೊಂಡ ರಾಜನು, "ಬಹಳ ಸಂತೋಷವಾಯಿತು. ಈ ಹುಡುಗನ ಮೂರು ತಲೆಮಾರಿನವರು ನಮಗೆ ಸೇವೆ ಮಾಡಿ ಧನ್ಯರಾದುದು ತುಂಬಾ ಸಂತೋಷದ ವಿಷಯ. ಹೀಗೆ ಧನ್ಯರಾಗುವ ಅವಕಾಶವನ್ನು ನನ್ನ ತಲೆಮಾರಿನಲ್ಲಾದರೂ ಹೊಸಬರಿಗೆ ಕೊಡುವುದೇ ನ್ಯಾಯವಾಗಿರುತ್ತೆ, ಹೌದಾ ?" ಎಂದನು.

ವಿಮಲನ ಬಾಯಿ ಕಟ್ಟಿತು. ಮತ್ತೆ ಎಂದಿಗೂ ಅವನು ತನ್ನವರನ್ನು ಉದ್ಯೋಗಕ್ಕಾಗಿ ರಾಜನ ಬಳಿಗೆ ಕರೆದುಕೊಂಡು ಬರಲೇ ಇಲ್ಲ.






ಒಂದು ಊರಿನಲ್ಲಿ ಭೂಪತಯ್ಯನೆಂಬ ಧನಿಕನೊಬ್ಬನಿದ್ದನು. ಅವನು ಸಿರಿಪುರವೆಂಬ ನೆರೆಯ ಗ್ರಾಮದಲ್ಲಿ ಹತ್ತು ಎಕರೆ ಬಂಜರು ನೆಲವನ್ನು ಕೊಂಡುಕೊಂಡನು. ಅವನಿಗೆ ಸ್ವಗ್ರಾಮದಲ್ಲಿ ಎಡೆತೆರಪಿಲ್ಲದಷ್ಟು ಕೆಲಸಗಳಿದ್ದುದರಿಂದ ತನ್ನ ಮಗನಾದ ರಮಾಪತಿಯನ್ನು ಕರೆದು, ಆ ಬಂಜರು ನೆಲವನ್ನು ಸಾಗುವಳಿಗೆ ಬರುವ ಹಾಗೆ ಏನೇನು ಮಾಡಬೇಕೋ ಮಾಡುವಂತೆ ಮಗನಿಗೇ ಭಾರವಹಿಸಿದನು. ಮಗನೊಂದಿಗೆ ಆ ಸಂಗತಿಯನ್ನು ಹೇಳುತ್ತ, "ಇದು ನಿನಗೆ ಹೊಸ ಕೆಲಸವಾದರೂ ಚಿಂತೆಯಿಲ್ಲ. ಸಿರಿಪುರದಲ್ಲಿ ನಮ್ಮ ದೂರದ ಬಂಧು ಕಾಳಪ್ಪಯ್ಯ ಇದ್ದಾನೆ. ಅಗತ್ಯವಿದ್ದರೆ ಅವನ ಹತ್ತಿರ ಆಲೋಚನೆ ಕೇಳು." ಎಂತಲೂ ಹೇಳಿದನು ಭೂಪತಯ್ಯ.

ರಮಾಪತಿ ಸಿರಿಪುರಕ್ಕೆ ಹೋಗಿ ತಂದೆ ಕೊಂಡುಕೊಂಡ ಆ ನೆಲವನ್ನು ತಿರುಗಾಡಿ ನೋಡಿದನು. ನಿಜಕ್ಕೂ ಅದು ಕುರಿಚಲು ಕಾಡುನೆಲ. ಎಲ್ಲಿ ನೋಡಿದರೂ ಹಾಳುಮೂಳು ಗಿಡಬಳ್ಳಿಗಳೂ, ಮುಳ್ಳು ಪೊದೆಗಳೂ ಸ್ವೇಚ್ಛೆಯಾಗಿ ಬೆಳೆದು ಹರಡಿದ್ದುವು. ಅವುಗಳನ್ನೆಲ್ಲ ಕಡಿದು ಹಾಕುವ ಕೆಲಸ ಮೊದಲು ಆಗಬೇಕು. ಅದಕ್ಕೆ ಎಷ್ಟು ಕೂಲಿಯಾಳುಗಳು ಬೇಕಾಗುವರೋ ಎಂದು ಅವನು ಆಲೋಚಿಸಿಕೊಂಡಿರುವಾಗ, ಗ್ರಾಮಸ್ಥನೊಬ್ಬನು ಅವನ ಬಳಿಗೆ ಬಂದನು.

ಆ ಬಂಜರು ನೆಲವು ರಮಾಪತಿಯದೆಂದು ತಿಳಿದುಕೊಂಡ ಗ್ರಾಮಸ್ಥನು, "ನನ್ನ ಹೆಸರು ರಾಜಪ್ಪ. ಈ ಗ್ರಾಮದಲ್ಲಿ ಇಟ್ಟಿಗೆ ತಯಾರಿಸಿ ಮಾರುವುದು ನನ್ನ ಕೆಲಸ. ಇಟ್ಟಿಗೆ ಮಾರಾಟದಿಂದ ನನ್ನ ಬದುಕು ಸಾಗುತ್ತಿದೆ. ಈ ಸ್ಥಳದ ಗಿಡ ಪೊದರುಗಳನ್ನೆಲ್ಲ ನಾನೇ ಕಡಿದುಕೊಂಡು ಹೋಗಿ, ಇಟ್ಟಿಗೆ ಬೇಯಿಸಲು ಉಪಯೋಗಿಸಿಕೊಳ್ಳುತ್ತೇನೆ. ಹೀಗೆ ಮಾಡಿದರೆ ನಿಮಗೆ ಇದನ್ನೆಲ್ಲ ಕಡಿದು ಶುಭ್ರಮಾಡುವ ಕೂಲಿ ಖರ್ಚು ತಪ್ಪುತ್ತದೆ. ನನಗೂ ಲಾಭ" ಎಂದನು.

ಯಾವುದಕ್ಕೂ ನಾಳೆ ಹೇಳುತ್ತೇನೆಂದು ಹೇಳಿ ರಮಾಪತಿ ಅವನನ್ನು ಕಳುಹಿಸಿಬಿಟ್ಟನು. ಈ ವಿಷಯವನ್ನು ಕಾಳಪ್ಪಯ್ಯನೊಂದಿಗೆ ಹೇಳಿ ಅವರ ಸಲಹೆಯಂತೆ ಮಾಡುವುದು ಒಳ್ಳೆಯದೆಂದು ರಮಾಪತಿಗೆ ತೋರಿತು.

ಜೆ. ಸಾಂಟ

ಆದರೆ ಕಾಳಪ್ಪಯ್ಯನು ರಮಾಪತಿ ಹೇಳಿದುದನ್ನು ಕೇಳಿ, "ಇಟ್ಟಿಗೆ ರಾಜಪ್ಪ ಆಗಲೇ ನಿನ್ನನ್ನು ಸಂಧಿಸಿದನೆ? ನೀನು ಇನ್ನೂ ಹುಡುಗನಾದರೂ ಒಂದೇ ಬಾರಿ ಅವನಿಗೆ ಮಾತುಕೊಡದಿದ್ದುದು ಒಳ್ಳೇದಾಯಿತು. ಇಲ್ಲಿ ಇಟ್ಟಿಗೆ ವ್ಯಾಪಾರ ಮಾಡುವವರು ಅನೇಕರಿದ್ದಾರೆ. ಆದ್ದರಿಂದ ಉರುವಲಿಗೆ ಭಾರೀ ಗಿರಾಕಿ ಇರುತ್ತದೆ. ನೀನು ಮೊದಲು ಕೂಲಿ ಜನರಿಂದ ಅಲ್ಲಿಯ ಗಿಡಪೊದರುಗಳನ್ನೆಲ್ಲಾ ಕಡಿಸಿ ರಾಶಿ ಹಾಕಿಸು. ಅವು ಒಣಗಿದ ಮೇಲೆ ಲಾಭದಾಯಕವಾಗಿ ಮಾರಬಹುದು" ಎಂದು ಸಲಹೆ ಮಾಡಿದನು.

ಆದರಂತೆ ರಮಾಪತಿ ರಾಜಪ್ಪನ ಕೋರಿಕೆಯನ್ನು ನಿರಾಕರಿಸಿ, ಕೂಲಿ ಜನರಿಂದ ಆ ಸ್ಥಳದ ಬೇಡದ ಗಿಡಮುಳ್ಳು ಪೊದರುಗಳನ್ನೆಲ್ಲ ಕಡಿಸಿ ರಾಶಿಮಾಡಿಸಿ ಹಳ್ಳತಿಟ್ಟು ಸರಿಪಡಿಸಿ ಶುಭ್ರಮಾಡಿಸಿದನು. ಕೆಲವು ದಿನಗಳಲ್ಲಿ ರಾಶಿ ಹಾಕಿದುವೆಲ್ಲಾ ಒಣಗಿ ಉರುವಲು ಸಿದ್ಧವಾದುವು. ಆದರೆ ಯಾವ ಇಟ್ಟಿಗೆಯ ವ್ಯಾಪಾರಿಗಳೂ ಅವನು ಕೂಲಿಯವರಿಗೆ ಕೊಟ್ಟ ಹಣಕ್ಕಿಂತ ಒಂದು ಕಾಸು ಕೂಡಾ ಹೆಚ್ಚಿಗೆ ಕೊಡಲು ಸಿದ್ಧರಾಗಲಿಲ್ಲ.

"ಇಲ್ಲಿ ಸುತ್ತುಮುತ್ತಲೂ ಇರುವುದೆಲ್ಲಾ ಬೆಟ್ಟ ಪ್ರದೇಶತಾನೆ? ಕೂಲಿಯವರನ್ನು ಮಾಡಿಬಿಟ್ಟರೆ ಉರುವಲಿಗೆ ಇಲ್ಲಿ ಕೊರತೆಯೇನಿಲ್ಲ. ಆ ಕೆಲಸ ನೀವು ಮಾಡಿಸಿಯಾಯಿತಾದುದರಿಂದ, ನಿಮಗಾದ ಕೂಲೀ ಖರ್ಚು ಮಾತ್ರ ನಾವು ಕೊಡುತ್ತೇವೆ." ಎಂದರು ಇಟ್ಟಿಗೆ ವರ್ತಕರು.

ಈಗೇನು ಮಾಡುವುದೆಂದು ರಮಾಪತಿ ಆಲೋಚಿಸುವಾಗಲೇ ನಾಲ್ಕಾರು ದಿನಗಳು ಕಳೆದುವು. ಮಳೆಗಾಲವು ಪ್ರಾರಂಭವಾಯಿತು. ನೆಲದ ಒಂದು ಕಡೆಯಲ್ಲಿ ರಾಶಿ ಹಾಕಿಸಿದ ಉರುವಲೆಲ್ಲವೂ ನೆನೆದು ತೊಪ್ಪೆಯಾಯಿತು. ಅವುಗಳನ್ನೆಲ್ಲ ದೂರ ಒಯ್ದು




ಹಾಕಿಸಲು ಬಾಡಿಗೆ ಬಂಡಿಯವರನ್ನು ಕೇಳಿದಾಗ ಅವರು ನೂರು ರೂಪಾಯಿ ಬಾಡಿಗೆ ಕೇಳಿದರು.

ಈ ಸಮಾಚಾರವನ್ನು ರಾಮಾಪತಿ ಕಾಳಪ್ಪಯ್ಯನೊಂದಿಗೆ ಹೇಳಿದನು. ಕಾಳಪ್ಪಯ್ಯನು ಬಂಡಿಯವರನ್ನು ಬೈದು ರಮಾಪತಿಯೊಂದಿಗೆ, "ಈ ಬಂಡಿಯವರೆಲ್ಲಾ ಆಶಾಪಾತಕಿಗಳು. ನನ್ನ ಸಲಹೆಯ ಹಾಗೆ ಮಾಡು. ನನ್ನ ಗುರುತಿನ ಬಂಡಿಯವನೊಬ್ಬನಿದ್ದಾನೆ. ಅವನು ಸ್ವಲ್ಪ ಕುಡುಕ ಅಷ್ಟೇ. ಒಂದು ಪತ್ತು ರೂಪಾಯಿ ಅವನ ಕೈಗೆ ಹಾಕಿದರೆ, ಈ ಕೊಳೆತ ವಸ್ತುಗಳನ್ನೆಲ್ಲಾ ದೂರ ಒಯ್ದು ಬಿಸುಡುತ್ತಾನೆ" ಎಂದನು.

ರಮಾಪತಿ ಆ ಬಂಡಿಯವನಿಗೆ ಹತ್ತು ರೂಪಾಯಿಯನ್ನು ಕೊಟ್ಟು, ಆ ಕೆಲಸವನ್ನು ಅವನಿಗೆ ಒಪ್ಪಿಸಿ ತನ್ನ ಊರಿಗೆ ಹೊರಟು ಹೋದನು.

ಮುಂದೆ ಎಂಟು ದಿನಗಳ ಮೇಲೆ ಆ ಊರಿನ ಪಟೇಲರಿಂದ ಅವನಿಗೆ ಕರೆ ಬಂದಿತು. ರಮಾಪತಿ

ಅವರನ್ನು ನೋಡಲು ಹೋದನು. ಪಟೇಲರು ಅವನಿಗೆ ಮರ್ಯಾದೆಮಾಡಿ ಕುಳ್ಳಿರಿಸಿ, "ಅಪ್ಪಾ ರಮಾಪತೀ, ನೀನು ಅಲ್ಲಿ ಮಾಡಿಸಿದ ಕೆಲಸ ಏನೂ ಚೆನ್ನಾಗಿಲ್ಲ. ನಿಮ್ಮ ಆ ಬಂಜರು ನೆಲದ ಕೊಳೆತ ಸೊಪ್ಪುಸೊದೆಗಳನ್ನೆಲ್ಲಾ ಪಕ್ಕದ ಕಾಲುವೆಯಲ್ಲಿ ಹಾಕಿಸಿಬಿಟ್ಟದ್ದೀ. ಮೊನ್ನೆ ಬಂದ ಮಳೆಗೆ ಅವೆಲ್ಲಾ ಹೊಡೆದುಕೊಂಡು ಬಂದು ಕೆರೆಯ ತೂಬನ್ನು ಮುಚ್ಚಿಕೊಂಡುವು. ಅದನ್ನೆಲ್ಲಾ ತೆಗೆಸಿ ಹಾಕಲು ನೂರು ರೂಪಾಯಿ ಖರ್ಚಾಯಿತು. ಆ ಮೊತ್ತವನ್ನು ಕೂಡಲೇ ಕೊಟ್ಟು ಬಿಡಬೇಕು. ನಿನ್ನ ತಂದೆ ದೊಡ್ಡ ಗುಣದವರಾದುದರಿಂದ, ನನಗೂ ಸ್ನೇಹಿತರಾಗಿರುವುದರಿಂದ ಅಪರಾಧದ ಕೆಳಗೆ ದಂಡ ಹಾಕದೆ ಬಿಟ್ಟುಬಿಡುತ್ತೇನೆ." ಎಂದರು.

ನಡೆದ ಸಂಗತಿ ಏನೆಂದು ಈಗ ರಮಾಪತಿಗೆ ಅರ್ಥವಾಯಿತು, ಕುಡುಕನಾದ ಆ ಬಂಡಿಯವನು, ಸುಲಭದಲ್ಲಿ ಕೆಲಸ ಮುಗಿಸುವ ಬುದ್ಧಿಯಲ್ಲಿ ಅವನ್ನೆಲ್ಲ ಬಾಚಿ ಸಮೀಪದಲ್ಲಿದ್ದ ಕಾಲುವೆಯಲ್ಲಿ ಹಾಕಿದ್ದಾನೆ. ಇದೆಲ್ಲಾ ಕಾಳಪ್ಪನ ಉಚಿತ ಸಲಹೆ ಕೇಳಿದುದರಿಂದ ಬಂದ ಗತಿ !

ರಮಾಪತಿ ಪಟೇಲರಿಗೆ ಕ್ಷಮಾಪಣೆ ಹೇಳಿಕೊಂಡು ನೂರು ನೊಪಾಯಿ ಕೊಟ್ಟನು. ಈ ಸಮಾಚಾರ ಕೇಳಿದ ಕಾಳಪ್ಪಯ್ಯನು, ಬಂಜರು ನೆಲದ ಹತ್ತಿರವಿದ್ದ ರಮಾಪತಿಯ ಬಳಿಗೆ ಹುಡುಕುತ್ತಾ ಬಂದು, "ಇದೇನು ಅನ್ಯಾಯ ಆ ಪಟೇಲನದು ! ನಿನಗೆ ನೂರು ರೂಪಾಯಿ ದಂಡವೆಂದು ಎಳೆದುಕೊಂಡನಂತಲ್ಲಾ? ಅವನಿಗೆ ನನ್ನ ಮೇಲೆ ಹಳೆಯ ಕೋಪವಿದೆ. ನೀನು ನನ್ನ ಸಂಬಂಧಿಕನೆಂದು ತಿಳಿದು ಇಂಥಾ ಹಾಳು ಕೆಲಸ ಮಾಡಿದ್ದಾನೆ. ಅಂಥವನನ್ನು ಸುಮ್ಮನೆ ಬಿಡಬಾರದು, ನಡೆ. ಪಟ್ಟಣಕ್ಕೆ ಹೋಗಿ ಈ ಪಟೇಲನ ಮೇಲೆ ಫಿರ್ಯಾದಿ ಮಾಡೋಣ. ಅವನಿಂದ ಒಂದಕ್ಕೆ ಎರಡು ಪಾಲು ಕಕ್ಕಿಸೋಣ" ಎಂದು ಸಲಹೆ ಮಾಡಿದನು.

ರಮಾಪತಿ ಬರುವ ಕೋಪವನ್ನು ನುಂಗಿಕೊಂಡು, "ಕಾಳಪ್ಪಯ್ಯನವರೇ ! ನಿಮ್ಮ ಉಚಿತ ಸಲಹೆಗೆ ದೊಡ್ಡ ನಮಸ್ಕಾರ.. ನನ್ನ ಬುದ್ಧಿಗೆ ತೋರಿದಂತೆ ನನ್ನ ಕೆಲಸ ನಾನು ಮಾಡಲಿಕ್ಕೆ ಬಿಟ್ಟು ಬಿಡಿ." ಎಂದನು.

ಕಾಳಪ್ಪಯ್ಯನು ಅವನನ್ನು ಒಂದು ರೀತಿಯಾಗಿ ನೋಡಿ, ತಲೆಯಾಡಿಸಿಕೊಂಡು ಹೊರಟು ಹೋದನು. "ನಾನು ಹಣ ಪಡೆಯದೆ ಉಚಿತವಾಗಿ ಸಲಹೆ ಹೇಳಿದುದರಿಂದಲೇ ಇವನ ದೃಷ್ಟಿಯಲ್ಲಿ ನನಗೆ ಬೆಲೆಯಿಲ್ಲದೆ ಹೋಯಿತು" ಎಂದು ತನ್ನೊಳಗೆ ತಾನೇ ಗೊಣಗಿಕೊಂಡನು ಕಾಳಪ್ಪಯ್ಯ.



# ಸೇವಕನ ಜಾಣ್ಮೆ

ರತ್ನಗಿರಿಯೂ ಧವಳಗಿರಿಯೂ ನೆರೆಹೊರೆಯ ರಾಜ್ಯಗಳಾಗಿದ್ದುವು. ಒಂದುಸಾರಿ ಹಠಾತ್ತಾಗಿ ಧವಳಗಿರಿ ರಾಜನಾದ ಶೂರವರ್ಧನನು ಸಣ್ಣದೊಂದು ನೆವನ ತೆಗೆದು ರತ್ನಗಿರಿಯ ಮೇಲೆ ದಂಡೆತ್ತಿ ಬಂದನು. ಧವಳಗಿರಿಗೆ ಇರುವ ಸೈನಿಕ ಬಲವು ರತ್ನಗಿರಿಗೆ ಇರಲಿಲ್ಲ. ರತ್ನಗಿರಿ ರಾಜನಾದ ಕೀರ್ತಿವರ್ಧನನು ಸಂಧಿ ಪ್ರಯತ್ನವನ್ನು ಪ್ರಾರಂಭಿಸಿದನು.

ಶೂರವರ್ಧನನು ಸಂಧಿಗೆ ಒಪ್ಪಿ, ಸಂಧಿಯ ಷರತ್ತುಗಳನ್ನು ಸರಿಪಡಿಸಿ ಸಿಂಧುಪಡಿಸಿಕೊಳ್ಳಲು ರತ್ನಗಿರಿಗೆ ಬಂದನು. ಅರಮನೆಯ ಅಂತರ್ಗೃಹದಲ್ಲಿ ರಾಜರಿಬ್ಬರೂ ಸಮಾವೇಶಗೊಂಡರು.

ಆ ಸಮಯದಲ್ಲಿ ಸೇವಕನೊಬ್ಬನು ಅವರಿಗೆ ತಣ್ಣಗಿನ ಪಾನೀಯವನ್ನು ತಂದನು. ಆಗ ಅವನಿಗೊಂದು ಸಮಸ್ಯೆ ಇದಿರಾಯಿತು.

ಪಾನೀಯವನ್ನು ಮೊದಲು ತಮ್ಮ ರಾಜನಾದ ಕೀರ್ತಿವರ್ಧನನಿಗೆ ಕೊಟ್ಟರೆ ತನ್ನನ್ನು ಅಗೌರವ ಪಡಿಸಿದರೆಂದು ಶೂರವರ್ಧನನಿಗೆ ಕೋಪಬರಬಹುದು. ಹಾಗಿಲ್ಲದೆ ಪಾನೀಯವನ್ನು ಮೊದಲು ಶೂರವರ್ಧನನಿಗೆ ಕೊಟ್ಟರೆ ತನ್ನ ಸೇವಕನೇ ತನ್ನನ್ನು ಕಡಿಮೆ ಮಾಡಿದನೆಂದು ಕೀರ್ತಿವರ್ಧನನ ಮನಸ್ಸಿಗೆ ಬಾಧೆಯುಂಟಾಗಬಹುದು.

ಈ ದ್ವಂದ್ವದಿಂದ ಪಾರಾಗಲು ಅವನಿಗೊಂದು ಉತ್ತಮ ಆಲೋಚನೆ ತೋರಿತು. ಎರಡು ಪಾನೀಯಗಳನ್ನೂ ಮೊದಲು ಕೀರ್ತಿವರ್ಧನನಿಗೇ ಕೊಡುತ್ತ, "ಪ್ರಭೂ! ಮಹಾರಾಜಾ ಶೂರವರ್ಧನರಿಗೆ ತಾವೇ ಸ್ವತಃ ಕೊಡುವುದು ಒಳ್ಳೇದು ಅಲ್ಲವೆ? ಅತಿಥಿಗಳಾಗಿ ಬಂದ ರಾಜರಿಗೆ ತಾವೇ ಸ್ವತಃ ಅತಿಥಿ ಮರ್ಯಾದೆ ಮಾಡುವುದು ಇಲ್ಲಿಯ ವಂಶ ಮರ್ಯಾದೆಯೆಂದು ಕೇಳಿದ್ದೇನೆ. ತಮ್ಮ ಚಿತ್ತ!" ಎಂದನು.

"ಹೌದೌದು! ನೆನಪಿಗೆ ತಂದೆ" ಎಂದನು ಕೀರ್ತಿವರ್ಧನ. ಸೇವಕನ ಮಾತಿಗೆ ಇಬ್ಬರು ರಾಜರೂ ಸಂತೃಪ್ತರಾದರು.






# ಪರೋಕ್ಷ ವೀರ

ಅನೇಕ ವರ್ಷಗಳ ಹಿಂದೆ ಒಂದು ಊರಿನಲ್ಲಿ ಸೌದೆ ಮಾರಿ ಜೀವಿಸುವವನೊಬ್ಬನಿದ್ದನು. ಅವನು ದಿನಾ ಬೆಳಗ್ಗೆ ಎಲ್ಲರಿಗಿಂತ ಮೊದಲೇ ಎದ್ದು ಅಡವಿಗೆ ಹೋಗುವನು. ಅಲ್ಲಿ ಕಷ್ಟಪಟ್ಟು ಕಟ್ಟಿಗೆಯ ಹೊರೆ ತಯಾರಿಸಿ ತಂದು ಮಾರಾಟ ಮಾಡಿ ಜೀವನ ನಡೆಸುವನು. ಭೈರನೆಂಬ ಆ ಸೌದೆಯವನಿಗೆ ಊರಿನಲ್ಲಿ ಒಳ್ಳೆಯ ಹೆಸರಿದ್ದಿತು.

"ನಮ್ಮ ಸೌದೇ ಭೈರ ತುಂಬ ನಂಬಿಕಸ್ಥ. ನ್ಯಾಯವಾದ ಬೆಲೆ ಪಡೆದುಕೊಂಡು ಒಳ್ಳೆಯ ಒಣಗಿದ ಕಟ್ಟಿಗೆಗಳನ್ನು ತಂದು ಹಾಕುತ್ತಾನೆ. ನಿಜಕ್ಕೂ ಒಳ್ಳೆಯ ಸೌದೆ ಬೇಕಾದರೆ ಅವನ ಹತ್ತಿರವೇ ಹಾಕಿಸಿಕೊಳ್ಳಬೇಕು" ಎಂದು ಜನರು ಅವನನ್ನು ಕುರಿತು ಮೆಚ್ಚಿ ಮಾತಾಡಿಕೊಳ್ಳುವರು. ಕೆಲವರು ಅವನ ಬಡತನದ ದುಸ್ಥಿತಿಗೆ ಮನಸ್ಸು ಕರಗಿ ಮನೆಯಲ್ಲಿರುವ ತಿಂಡಿಗಳನ್ನು ಕೂಡ ಕೊಡುವರು. ಆದರೆ ಅವನು ಇದ್ದುದರಲ್ಲಿ ತೃಪ್ತಿಪಡುವವನೇ ಹೊರತು ಹೆಚ್ಚಿನ ಆಶೆಗಳಿಗೆ ಹೋಗುವವನಲ್ಲ.

ಅವನು ಅಡವಿಗೆ ಹೋಗಿ ಬರುವ ದಾರಿ ರಾಜಭವನದ ಕೋಟೆಯ ಬದಿಯಲ್ಲೇ ಹೋಗುತ್ತಿತ್ತು. ಆ ದಾರಿ ಬಿಟ್ಟು ಅವನು ಬೇರೆ ದಾರಿ ಹಿಡಿಯುತ್ತಿರಲಿಲ್ಲ. ಆಗ ಸಾಮಾನ್ಯವಾಗಿ ಮಹಾರಾಜನು ಮೇಲಂತಸ್ತಿನಲ್ಲಿರುತ್ತ ಭೈರನನ್ನು ಗಮನಿಸಿಕೊಂಡಿರುವನು. ಮಹಾರಾಜನದು ಅತ್ಯಂತ ದಯಾರ್ದ್ರ ಹೃದಯ. ಹಾಗಿದ್ದರೂ ಅದೇನು ಕಾರಣವೋ ಭೈರನನ್ನು ನೋಡಿದಾಗಲೆಲ್ಲ ರಾಜನ ಮನಸ್ಸಿನೊಳಗೆ ಏನೋ ಒಂದು ತಳಮಳವೇಳುತ್ತಿದ್ದಿತು. ತನಗೆ ಹಾಗೇಕೆ ಆಗುವುದೆಂದು ರಾಜನಿಗೆ ಗೊತ್ತಾಗುತ್ತಿದ್ದಿಲ್ಲ.

ಈ ತಳಮಳವು ಕೆಲವು ದಿನಗಳಲ್ಲಿ ಏನೋ ಉರಿಯುವ ಹಾಗೆ ನೋಯಿಸತೊಡಗಿತು. ಬೇಗದಲ್ಲೇ ರಾಜನಿಗೆ ಆ ಸೌದೇ ಭೈರನೊಬ್ಬ ಶತ್ರುವಿನಂತೆ ಭಾಸವಾಗತೊಡಗಿತು. ರಾಜನಲ್ಲಿ ಹುಟ್ಟಿದ ಈ ವೈರವು ಚೆನ್ನಾಗಿ ಬೆಳೆದು, ಅವನನ್ನು ಕೊಂದು ಬಿಡಬೇಕೆಂಬುದರ ವರೆಗೂ ಹೋಗತೊಡಗಿತು. ಆಗ ರಾಜನು ಸಾವಧಾನವಾಗಿ ಭಾವಾವೇಗವನ್ನು ಹತ್ತಿಕ್ಕಿಕೊಂಡು ಆಲೋಚಿಸತೊಡಗಿದನು. "ಅವನ ಪಾಡಿಗೆ ಶ್ರಮಿಸಿಕೊಂಡಿರುವ ಆ ಕಷ್ಟಜೀವಿ ನನಗೇನು ತಾನೇ ಅಪರಾಧ ಮಾಡಿದ್ದಾನೆ? ಏನು ತಾನೇ ಮಾಡಲು

ಅವನಿಂದಾದೀತು ? ಹಾಗಾದರೆ ನನಗೇಕೆ ಇಂಥ ಕೋಪದ ಭಾವನೆ ಏಳಬೇಕು ? " ಈ ವಿಧವಾಗಿ ರಾಜನು ತನ್ನೊಳಗೇ ಪ್ರಶ್ನಿಸಿಕೊಳ್ಳುತ್ತ, ಕಾರಣ ತಿಳಿಯದೆ, ಯಾರೊಂದಿಗೂ ಹೇಳಲು ತೋರದೆ ತನ್ನೊಳಗೇ ಅಡಗಿಸಿ ಸಂಕಟಪಡುತ್ತಿದ್ದನು.

ನಿಜ ನೋಡಿದರೆ ರಾಜನಾದವನು ಹಾಗೆ ಚಿಂತಿಸ ಬೇಕಾದ ಅಗತ್ಯವಿರಲಿಲ್ಲ. ಕೋಟೆಯ ಹತ್ತಿರದ ದಾರಿಯಲ್ಲಿ ಅವನು ನಡೆಯಬಾರದೆಂದು ಆಜ್ಞಾಪಿಸಿದರೆ ಸಾಕು, ಮತ್ತೆ ಅವನು ರಾಜನ ಕಣ್ಣಿಗೆ ಬೀಳಲಾರ. ಆದರೆ, ಹಾಗೆ ಅಧಿಕಾರ ವಿನಿಯೋಗದಿಂದ ಈ ಬಾಧೆಯನ್ನು ತೊಲಗಿಸಿಕೊಳ್ಳಲು ಇಷ್ಟವಿರಲಿಲ್ಲ. ಇದರ ಮೂಲ ಕಾರಣವೇನೆಂದು ಕಂಡು ಹಿಡಿಯಬೇಕೆಂತಲೇ ಇದ್ದನು.

ಒಂದು ದಿನ ರಾಜನ ಮುಖವನ್ನು ಗಮನಿಸಿದ ಮಂತ್ರಿ, ಅವನ ಗಹನ ವಿಚಾರಕ್ಕೆ ಕಾರಣವೇನೆಂದು ಕೇಳಿದನು. ರಾಜನು ತನ್ನ ಸಮಸ್ಯೆಯನ್ನು ಮಂತ್ರಿಯ ಮುಂದೆ ಹೇಳಲು, ಮಂತ್ರಿಗೂ ಬಹಳ ಆಶ್ಚರ್ಯವಾಯಿತು.

ಯಾವುದಕ್ಕೂ ಮೊದಲು ಸೌದೆ ಭೈರನನ್ನು ಪರೀಕ್ಷಿಸಬೇಕೆಂದು ಮಂತ್ರಿ ಗೂಢಚಾರರನ್ನು ನಿಯಮಿಸಿದನು. ಅಲ್ಲದೆ ಭೈರನನ್ನು ತಾನೂ ಸ್ವತಃ ಪರೀಕ್ಷಿಸಲು ತೊಡಗಿದನು. ಎಲ್ಲಿಗೆ ಹೋಗಿ ಎಷ್ಟು ಮಂದಿಯನ್ನು ವಿಚಾರಿಸಿದರೂ ಸೌದೆಯ ಭೈರನನ್ನು ಕುರಿತು ಒಳ್ಳೆಯ ಮಾತೇ ಕೇಳಿಸುತ್ತಿತ್ತು. ಅವನು ಸಾಧು ಸ್ವಭಾವದವನು, ಕಷ್ಟಜೀವಿ. ನ್ಯಾಯ ರೀತಿಯಲ್ಲಿರುವವನು. ಹೀಗೆ ಭೈರನನ್ನು ಕುರಿತು ಮೆಚ್ಚಿಕೊಳ್ಳುವಂತಹ ನುಡಿಗಳೇ ಬರುತ್ತಿದ್ದುವಲ್ಲದೆ ಪ್ರತಿಕೂಲವಾದುದೊಂದೂ ಹೊರಬರಲಿಲ್ಲ.

ಮಂತ್ರಿ ಕೂಡಾ ಅವನ ಕೆಲಸವನ್ನು ಪರೀಕ್ಷಿಸಿ ಯಾವ ಕೆಡುಕನ್ನೂ ಅವನಲ್ಲಿ ಕಾಣದಾದನು. ಇದನ್ನು ರಾಜನಿಗೆ ಹೇಳಿಬಿಟ್ಟರೆ ಮಂತ್ರಿಯ ಬುದ್ಧಿ



ಇಷ್ಟೇನಾ ಎಂದು ರಾಜನಿಗೆ ತೋರಬಹುದಷ್ಟೇ ? ಅಂತಲೇ ಮಂತ್ರಿ ಕೊನೆಯ ಪ್ರಯತ್ನವಾಗಿ ಒಂದು ಕೆಲಸ ಮಾಡಿದನು. ಒಂದು ದಿನ ರಾತ್ರಿ ಸೌದೆ ಭೈರನ ಮನೆಯೊಳಗೇ ಹುಡುಕಬೇಕೆಂದು ನಿಶ್ಚಯಿಸಿಕೊಂಡು ಹೊರಟನು. ವೇಷ ಮರೆಸಿ ದಾರಿ ಹೋಕನಂತೆ ರಾತ್ರಿಯ ಹೊತ್ತಿನಲ್ಲಿ, ಒಂದಿಷ್ಟು ನೀರು ಕೇಳುವ ನೆವನದಲ್ಲಿ ಭೈರನ ಗುಡಿಸಲನ್ನು ಹೊಕ್ಕನು ಮಂತ್ರಿ. ಅಲ್ಲೇನಿದೆ ? ಧನಧಾನ್ಯಗಳು ಕೂಡಾ ಸಂಗ್ರಹವಾಗಿಲ್ಲ. ಒಂದು ಮೂಲೆಯಲ್ಲಿ ಸ್ವಲ್ಪ ಕಟ್ಟಿಗೆಗಳನ್ನು ಬಹಳ ಜೋಪಾನವಾಗಿರಿಸಿದ್ದು ಕಂಡಿತು. ಅವನ ವೃತ್ತಿ ಕಟ್ಟಿಗೆಯದೇ ಆದರೂ, ಸ್ವಲ್ಪವನ್ನು ಮಾತ್ರ ಚೆಂದಾಗಿ ಒಟ್ಟಿ ಅಟ್ಟಿಸಿ ಆ ರೀತಿಯಾಗಿ ಇಟ್ಟುದರಲ್ಲಿ ಏನೋ ವಿಶೇಷವಿರುವಂತೆ ಮಂತ್ರಿಗೆ ತೋರಿತು.

ಮಂತ್ರಿ ಅದೂ ಇದೂ ಮಾತಾಡುತ್ತ "ಅಲ್ಲಪ್ಪಾ, ಆ ಮೂಲೆಯಲ್ಲಿ ಅಷ್ಟೊಂದು ಚೆಂದಾಗಿ ಮುಚ್ಚಿ

ಇಟ್ಟಿರುವ ಕಟ್ಟಿಗೆ ಏತಕ್ಕಾಗಿ? ಬಹಳ ಜೋಪಾನವಾಗಿ ಪೇರಿಸಿಟ್ಟಿರುವಿಯಲ್ಲಾ?" ಎಂದು ಪ್ರಶ್ನಿಸಿದನು.

"ಅವು ಸಾಮಾನ್ಯದವರಿಗೆ ಮಾರುವ ಕಟ್ಟಿಗೆ ಅಲ್ಲ ಬಿಡಿ" ಎಂದನು ಭೈರ. ನಿಜ ಸಂಗತಿ ಹೇಳಲು ಅವನು ಹಿಂಜರಿಯುವಂತೆ ಮಂತ್ರಿಗೆ ತೋರಿತು.

"ಅಂದರೆ...ಏನು ವಿಶೇಷವಪ್ಪಾ ಇದರಲ್ಲಿ?" ಎಂದು ಮಂತ್ರಿ ಆ ಕಟ್ಟಿಗೆಯನ್ನು ತೆಗೆದು ನೋಡಲು ಎರಡಡಿ ಮುಂದೆ ಹೋದನು.

"ಅದೊಂದು ಗುಟ್ಟಿನ ವಿಷಯ. ಹಾಗೆಲ್ಲಾ ಹೇಳುವಂಥಾದ್ದಲ್ಲ" ಎಂದು ಭೈರನು ಹೇಳಿದುದನ್ನು ಕೇಳಿ ಮಂತ್ರಿ ನಗುತ್ತ, "ಆರೆ! ನಿನ್ನಂಥಾ ಬಡಗುಡಿಸಿನಲ್ಲಿ ಕೂಡಾ ಗುಟ್ಟು ಇದೆಯೇನು? ಅದರ ಬುಡದಲ್ಲಿ ನಿಧಿಗಿದಿ?..." ಎಂದನು ಗುಟ್ಟಾಗಿ ಮಂತ್ರಿ.

"ಹಾಗಿದ್ದರೆ ನಾನು ಹೀಗಿರುತ್ತೇನೆಯೆ? ನೋಡಿರಯ್ಯಾ, ನಾನು ಯಾರೊಡನೆಯೂ ಸುಳ್ಳು ಹೇಳುವುದಿಲ್ಲವೆಂದು ದೇವರಾಣೆ ಹಾಕ್ಕೊಂಡಿದ್ದೇನೆ. ನೀವು ಅಪಾರ್ಥಮಾಡಿಕೊಳ್ಳದಿದ್ದರೆ, ಯಾರೊಂದಿಗೂ ಹೇಳದಿದ್ದರೆ ಸರಿ. ಹೇಳುತ್ತೇನೆ. ಅವು ಗಂಧದ ಕಟ್ಟಿಗೆಗಳು. ಅಪರೂಪವಾಗಿ ಆಗಾಗ ಕಾಡಿನಲ್ಲಿ ಸಿಕ್ಕಿದ್ದು. ಸಾಧ್ಯವಾದಷ್ಟು ಸಂಗ್ರಹಿಸಿ ಕಾದಿಟ್ಟರೆ, ನೀವು ಹೇಳಿದಿರಲ್ಲಾ ನಿಧಿ ಅಂತ, ಅಷ್ಟು ಬೆಲೆ ನನ್ನ ಜೀವಮಾನದಲ್ಲೇ ಬಂದೀತು." ಎಂದ ಭೈರ.

"ಅದು ಹೇಗಪ್ಪಾ? ಗಂಧದ ಕಟ್ಟಿಗೆ ಮಾರಿದರೆ ಯಾವಾಗಲೂ ಒಳ್ಳೆ ಬೆಲೆ ಇದ್ದೇ ಇರುತ್ತೆ. ಹೀಗೆ ಕಾದಿಡುವ ಅಗತ್ಯವೇನಿದೆ?" ಎಂದನು ಮಂತ್ರಿ.

"ಅದರಿಂದೇನು ಪ್ರಯೋಜನ ಹೇಳಿ? ನನ್ನ ಯೋಚನೆ ಅದಲ್ಲ. ನಮ್ಮ ಮಹಾರಾಜರು ಬಂಗಾರದಂಥವರು. ದೀರ್ಘಾಯುಷಿಗಳಾಗಿರಬೇಕು. ಎಷ್ಟಾದರೂ ವೃದ್ಧರಲ್ಲವೆ? ಅವರು ಮರಣಹೊಂದಿದರೆ ಒಳ್ಳೆಯ ಒಣಗಿದ್ದ ಗಂಧದ ಕಟ್ಟಿಗೆಗೆ, ತುಂಬಾ ಬೆಲೆ ಬರುತ್ತೆ. ಬಹುಮಾನವೂ ಬಂದೀತು. ಅದರಿಂದ ನನ ದಾರಿದ್ರ್ಯ ತೀರೀತು. ನನ್ನ ವೃದ್ಧಾಪ್ಯವನ್ನು ಶ್ರಮ ಪಡದೆ ಕಳೆಯಬಹುದು, ಈಗ ಹೇಳಿರಿ. ಇದನ್ನು ಯಾರೊಂದಿಗಾದರೂ ಹೇಳಲು ಸಾಧ್ಯವೇ?" ಎಂದನು ಭೈರ.

ಅವನ ಆಲೋಚನೆಯನ್ನು ಕೇಳಿ ಮಂತ್ರಿ ಬೆರಗಾದನು. "ನಿಜ! ನಿಜ!" ಎಂದಷ್ಟೇ ಹೇಳಿ ಅಲ್ಲಿಂದ ಹೊರಟನು. ತಾನು ತಿಳಿದ ಈ ಸಂಗತಿಯನ್ನು ರಾಜನೊಂದಿಗೆ ಹೇಳಿದನು. ಅದನ್ನು ತಿಳಿದು ರಾಜನಿಗೆ ತುಂಬಾ ಸಮಾಧಾನವಾಯಿತು, ಭೈರನ ಆಲೋಚನೆಯಲ್ಲಿ ಸ್ವಲ್ಪವೂ ತಪ್ಪಿರುವಂತೆ ಕಾಣಲಿಲ್ಲ. ಮನಸ್ಸಿನೊಳಗಿನ ವೈರದ ಉರಿ ಒಮ್ಮೆಗೇ ಮಾಯವಾಯಿತು. ಬಡ ಸೌದೇ ಭೈರನ ದಾರಿದ್ರ್ಯವು ತೀರಿ ಹೋಗುವ ಹಾಗೆ ಮಾಡಿಸಿದನು ಆ ರಾಜ.





ಕೃಷ್ಣನು ಆಶ್ಚರ್ಯಪಡುವುದನ್ನು ನೋಡಿ ರುಕ್ಮಿಣಿ ಚೆಂದುಟಿಗಳಲ್ಲಿ ಸ್ವಲ್ಪ ಮಾತ್ರ ಅರಳುವ ಹೂವಿನ ಹಾಗೆ ಮುಗುಳು ನಗುವನ್ನರಳಿಸಿ, "ಅಯ್ಯೋ ಪಾಪ ! ಏನೂ ತಿಳಿಯದೆಂದೇ ಆಗಲಿ. ನಾನೇ ಹೇಳುತ್ತೇನೆ. ನಾಥಾ ! ನನ್ನ ಮಾತನ್ನು ಸತ್ಯವೆಂದೇ ನಂಬು. ಈ ದಿನ ನನ್ನ ಹೃದಯದಲ್ಲಿ ಆನಂದವು ಉಕ್ಕುತ್ತಿದೆ. ಆ ಕನ್ಯಾಮಣಿ ಸತ್ಯಭಾಮೆ ನಿನ್ನ ಮೇಲೆ ಎಷ್ಟು ಆಸೆ ಇಟ್ಟಿರುವಳು ಗೊತ್ತೇ ? ಒಮ್ಮೆಗೇ ನಿನ್ನನ್ನು ಹಿಡಿದು ತನ್ನ ಮುಷ್ಟಿಯೊಳಗೆ ಇಟ್ಟುಕೊಳ್ಳ ಬೇಕೆಂದಿರುವಷ್ಟು ಮಮತೆ ಅವಳ ಕಣ್ಣಿನಲ್ಲಿರುವು ದನ್ನು ನಾನು ನೋಡಿದೆ ಅಯ್ಯೋಪಾಪ ಅನಿಸು ತ್ತದೆ." ಎಂದಳು.

"ಹಾಗಾದರೆ ನೀನು ? ನಿನ್ನನ್ನು ನೋಡಿ ಎಲ್ಲರೂ ಅಯ್ಯೋ ಪಾಪ ಅನ್ನಬೇಕಾದೀತಲ್ಲಾ!" ಎಂದು ಕೃಷ್ಣನು ಅವಳ ಮುಖವನ್ನು ಇನ್ನಿಷ್ಟು ಆಶ್ಚರ್ಯದಿಂದ ಕಣ್ಣುಗಳನ್ನು ಅರಳಿಸಿ ನೋಡಿದನು.

"ನಾನು ನಿನ್ನೊಂದಿಗಿನ ಅಣುಗಳೊಂದಿಗೆ ಅಣು ವಾಗಿ ಇದ್ದೇನಲ್ಲಾ ! ಆಮೇಲೆ ನೀನು ಯಾರು ಮುಷ್ಟಿಯೊಳಗಿದ್ದರೂ ನಾನು ನಿನ್ನೊಳಗೆ ಇದ್ದೇ ಇರುತ್ತೇನೆ. ನಿನ್ನಿಂದ ಇತರರಿಗೆ ಸಂತೋಷವಾದರೆ ನನಗೂ ಅದು ಸಂತೋಷವೇ. ನನ್ನ ಸಂತೋಷ ನೋಡಿ ಎಲ್ಲರೂ ಸಂತೋಷಿಸುತ್ತಾರೆ." ಎಂದಳು ರುಕ್ಮಿಣಿ.

"ರುಕ್ಮಿಣೀ ! ಎಷ್ಟು ದೊಡ್ಡ ಭಾವನೆ ನಿನ್ನದು ! ಎಷ್ಟು ದೊಡ್ಡ ಮನಸ್ಸು ! ನೀನು ಅಂಥವಳಾದುದ ರಿಂದಲೇ ನನ್ನನ್ನು ಆಕರ್ಷಿಸಿ ನಿನ್ನನ್ನು ಎತ್ತಿಕೊಂಡು ಬರುವ ಹಾಗೆ ಮಾಡಿರುವಿ" ಎಂದನು ಕೃಷ್ಣ.

"ನಾನು ನನಗೆ ನಿಜವೆಂದು ತೋರುವುದನ್ನೇ ಹೇಳುತ್ತೇನೆ. ನನಗಿಂತಲೂ ಸತ್ಯಭಾಮೆಯದೇ ದೊಡ್ಡ ಮಮತೆ. ಅದು ತುಂಬ ಬಲವಾಗಿ, ಅನಂತವಾದ ಪ್ರಕೃತಿ ಶಕ್ತಿಯೊಂದಿಗೆ ಕೂಡಿದ್ದು, ನನ್ನಲ್ಲಿ ಭಕ್ತಿ ಪ್ರಧಾನ ಭಾವನೆಯೊಂದೇ" ಎಂದು ರುಕ್ಮಿಣಿ ಹೇಳಲು, ಕೃಷ್ಣನು ಮುಗುಳು ನಗುತ್ತ ಅವಳ ಬಾಯಿಯನ್ನು ಮುಚ್ಚಿ, "ಸಾಕು ಬಿಡು, ವೇದಾಂತ ಮಾತಾಡಬೇಡ" ಎಂದನು.

## ೧೪. ಸತ್ಯಭಾಮಾ ಪರಿಣಯ



ಮುಂದೆ ಕೆಲವು ದಿನಗಳು ಕಳೆಯಲು, ವಿನಾಯಕನ ಚತುರ್ಥಿಯ ದಿನ ಕೃಷ್ಣನು ಚಂದ್ರನ ಪ್ರತಿಬಿಂಬವನ್ನು ನೋಡಿದುದರ ಫಲ ಗೋಚರವಾಯಿತು. "ಶಮಂತಕಮಣಿಯನ್ನು ಕೃಷ್ಣನು ಅಪಹರಿಸಿಬಿಟ್ಟನು!" ಎಂಬ ವಾರ್ತೆ ಕಾಳ್ಗಿಚ್ಚಿನಂತೆ ನಾಲ್ಕು ಸುತ್ತಲೂ ಹರಡಿತು. ಸತ್ರಾಜಿತ್ತುವೇ ಹಾಗೆ ಹೇಳಿ ವಾರ್ತೆ ಹರಡುವಂತೆ ಮಾಡಿದ್ದನು. ಮಣಿಯನ್ನು ಕಳೆದುಕೊಂಡ ಸತ್ರಾಜಿತ್ತು, ಆ ದುಃಖದಿಂದ ಹುಚ್ಚನಾಗಿ ಬೀದಿ ಬೀದಿ ತಿರುಗುತ್ತ, "ಕಳ್ಳ ಕೃಷ್ಣ, ಕಡೆಗೂ ನನ್ನ ಮಣಿ ಅಪಹರಿಸಿದ! ನನ್ನ ಸರ್ವಸ್ವವೂ ಹೋಯಿತು! ಏನು ಮಾಡಲಿ?" ಎಂದು ಕೈಕೈ ಹಿಸುಕುತ್ತ, ಕೂಗುತ್ತ, ತಿರುಗುತ್ತಿದ್ದನು.

ತನ್ನ ಮೇಲೆ ಬಿದ್ದ ವೃಥಾಪವಾದವನ್ನು ಹೋಗಲಾಡಿಸಿಕೊಳ್ಳಬೇಕಾದುದು ಕೃಷ್ಣನಿಗೆ ಅಗತ್ಯವಾಯಿತು. ಅದಕ್ಕಾಗಿ ಚಿಂತಿಸಿ ಪ್ರಯೋಜನವಿಲ್ಲವೆಂದು ಕೃಷ್ಣನು ದೃಢ ಚಿತ್ತನಾಗಿ "ವಿಘ್ನೇಶ್ವರಾ! ನಿನ್ನಮ್ಮನ ಶಾಪವನ್ನು ನಡೆಯಿಸುವಿಯಾ? ಇನ್ನಾದರೂ ದಯದೋರಪ್ಪಾ! ಅಪವಾದದಿಂದ ಪಾರುಮಾಡು!" ಎಂದು ಧ್ಯಾನಮಾಡಿ ಶಮಂತಕ ಮಣಿಯ ಅನ್ವೇಷಣೆಗೆ ಹೊರಟನು.

ಅದು ಅರಣ್ಯದಲ್ಲಿ ಕಳೆದು ಹೋಗಿರುವುದೆಂದು ತಿಳಿದು ಕೃಷ್ಣನು ಅರಣ್ಯಕ್ಕೆ ಹೋದನು. ನಡೆದ ಸಂಗತಿ ಏನೆಂದರೆ, ಸತ್ರಾಜಿತ್ತು, ತನ್ನ ಮಗಳು ಸತ್ಯಭಾಮೆಯನ್ನು ತನ್ನ ಸೋದರಳಿಯನಾದ ಶತಧನ್ವನೆಂಬ ರಾಜನಿಗೆ ಕೊಟ್ಟು ವಿವಾಹ ಮಾಡಬೇಕೆಂಬ ನಿರ್ಣಯಕ್ಕೆ ಬಂದಿದ್ದನು. ಆ ಸಂಗತಿಯನ್ನು ಶತಧನ್ವನೊಂದಿಗೆ ಮಾತಾಡಲು ತನ್ನ ತಮ್ಮನಾದ ಪ್ರಸೇನಜಿತ್ತುವನ್ನು ಕಳುಹಿಸಿದ್ದನು. ಪ್ರಸೇನಜಿತ್ತು, ಶಮಂತಕ ಮಣಿಯನ್ನು ಧರಿಸಿಕೊಂಡು ಅರಣ್ಯ ಮಾರ್ಗದಲ್ಲಿ ಹೋಗುತ್ತಿದ್ದಾಗ, ಒಂದು ಸಿಂಹವು ಆ ಮಣಿಯಿಂದ ಆಕರ್ಷಿತವಾಗಿ ಪ್ರಸೇನಜಿತ್ತುವನ್ನು ಕೊಂದುಹಾಕಿತ್ತು. ಆಗ ಜಾಂಬವಂತನು ಅದನ್ನು ನೋಡಿ ಸಿಂಹವನ್ನು ಕೊಂದು, ಆ ಮಣಿಯನ್ನು ತೆಗೆದುಕೊಂಡು ಹೋಗಿ ತನ್ನ ಕುಮಾರಿ ಜಾಂಬವತಿಯ ಕೈಗೆ ಕೊಟ್ಟನು.

ಮಣಿಯನ್ನು ಆಸೆಯಿಂದ ಕೇಳಿ ಎದೆಯ ಮೇಲೆ ಅಲಂಕರಿಸಿಕೊಂಡು ಹೋದ ತನ್ನ ತಮ್ಮನು ಹಿಂದಿರುಗಿ ಬಾರದಿರುವುದನ್ನು ನೋಡಿ, ಕೃಷ್ಣನ ಮೇಲೆಯೇ ಸತ್ರಾಜಿತ್ತುವಿಗೆ ಸಂಶಯವಾಯಿತು.

ಕೃಷ್ಣನು ಆ ಮಣಿಯನ್ನು ಕೇಳಿದ್ದನಷ್ಟೇ? ಅಂತಲೇ ಕೃಷ್ಣನು ತನ್ನ ತಮ್ಮನನ್ನು ಕೊಂದು ಶಮಂತಕ ಮಣಿಯನ್ನು ಅಪಹರಿಸಿಕೊಂಡು ಹೋದನೆಂದು ಸತ್ರಾಜಿತ್ತು ಹೇಳಿಕೊಂಡಿದ್ದನು. ಸತ್ಯಭಾಮೆಯನ್ನು ಮದುವೆಯಾಗಬೇಕೆಂದು ಜೊಲ್ಲು ಸುರಿಸಿಕೊಂಡಿದ್ದ ಶತಧನ್ವನು ಸತ್ರಾಜಿತ್ತುವನ್ನು ಸಮಾಧಾನಪಡಿಸುತ್ತ, ಜರಾಸಂಧನೇ ಮೊದಲಾದ ಕೃಷ್ಣನ ಶತ್ರುಗಳ ಹತ್ತಿರ ದೂರಿಕೊಂಡನು. ಅವರು ಸತ್ರಾಜಿತ್ತುವಿನ ಪಕ್ಷವಾಗಿ



ಕೃಷ್ಣನ ಮೇಲೆ ಹಗೆ ತೀರಿಸಲು ಸಹಾಯ ಮಾಡು ತ್ತೇವೆಂದು ಸುದ್ದಿ ಕಳುಹಿಸಿದರು.

ಇಲ್ಲಿ ಕೃಷ್ಣನು ಶಮಂತಕಮಣಿಯನ್ನು ಅನ್ವೇಷಿ ಸುತ್ತಾ, ಅರಣ್ಯದಲ್ಲಿ ಸತ್ತು ಬಿದ್ದ ಪ್ರಸೇನನನ್ನೂ, ಸಿಂಹವನ್ನೂ, ಜಾಂಬವಂತನು ಹೋದ ಪಾದ ಚಿಹ್ನಗಳನ್ನೂ ನೋಡಿ ಜಾಂಬವಂತನ ಗುಹೆಗೆ ಹೋದನು.

ಗುಹೆಯೊಳಗೆ ನವಯೌವನದಿಂದ ಸುಂದರಿಯಾದ ಜಾಂಬವತಿ ಶಮಂತಕ ಮಣಿಯನ್ನು ಚೆಂಡಿನ ಹಾಗೆ ಹಾರಿಸುತ್ತ ಆಟವಾಡುತ್ತಿದ್ದಳು. ಜಾಂಬವತಿ ಚಿಕ್ಕ ಮಗುವಾಗಿರುವಾಗಲೇ ಅರಣ್ಯದಲ್ಲಿ ಸಿಕ್ಕಿದ ಅನಾಥ ಶಿಶುವಾಗಿದ್ದ ರಾಜಪುತ್ರಿ. ಜಾಂಬವಂತನು ಅವಳನ್ನು ಎತ್ತಿಕೊಂಡು ಬಂದು ಅತ್ಯಂತ ವಾತ್ಸಲ್ಯದಿಂದ ಪೋಷಿಸಿ ಬೆಳೆಯಿಸಿದ್ದನು.

ಶಮಂತಕ ಮಣಿಯನ್ನು ತೆಗೆದುಕೊಳ್ಳಲು ಕೃಷ್ಣನು ಅವಳ ಕೈಯನ್ನು ಹಿಡಿದನು. ಜಾಂಬವತಿ ಕೃಷ್ಣ ನನ್ನು ನೋಡಿ ಕೈ ಬಿಡಿಸಿಕೊಳ್ಳಲು ಪ್ರಯತ್ನಿಸದೆ, ತಲೆ ತಗ್ಗಿಸಿ ನಾಚಿಕೊಂಡು ಕಡೆಗಣ್ಣಿನಿಂದ ಕೃಷ್ಣನನ್ನೇ ನೋಡಿಕೊಂಡಿರಲು, ಜಾಂಬವಂತನು ಗುಹೆಯೊಳಗೆ ಬಂದು ಕೃಷ್ಣನ ಮೇಲೆ ಲಂಘಿಸಿದನು. ಕೃಷ್ಣ ಜಾಂಬವಂತರೊಳಗೆ ಹನ್ನೆರಡು ದಿನಗಳವರೆಗೆ ದೊಡ್ಡ ಯುದ್ಧವೇ ನಡೆಯಿತು.

ಕಡೆಗೆ ಕೃಷ್ಣನು ಮುಷ್ಟಿಯಿಂದ ಜಾಂಬವಂತನ ಎದೆಯ ಮೇಲೆ ಒಮ್ಮೆ ಬಲವಾದ ಗುದ್ದು ಹೊಡೆದನು. ಆ ಹೊಡೆತದಿಂದ ಹಿಂದಿನ ಸಂಗಾತಿ ರಾಮನೇ ಈಗ ಕೃಷ್ಣನಾಗಿ ಅವತರಿಸಿದ್ದಾನೆಂದು ಜಾಂಬವಂತನಿಗೆ ತಿಳಿಯಿತು.

ಕೂಡಲೇ ಜಾಂಬವಂತನು ಕೃಷ್ಣನಿಗೆ ನಮಿಸಿ "ನನ್ನ ರಾಮಕೃಷ್ಣಾ! ನನ್ನ ಅಜ್ಞಾನ ಕ್ಷಮಿಸು. ಜಾಂಬ ವತಿಯ ಕೈ ಹಿಡಿದಾಗಲೇ ನಾನು ತಿಳಿಯಬೇಕಿತ್ತು. ಇನ್ನು ಇವಳು ನಿನ್ನವಳೇ!" ಎಂದು ಹೇಳಿ, ಶಮಂತಕ ಮಣಿಯನ್ನೂ, ಜಾಂಬವತಿಯನ್ನೂ ಒಟ್ಟಿಗೇ ಕೃಷ್ಣನ ಕೈಗೆ ಸಮರ್ಪಿಸಿದನು.

ಕೃಷ್ಣನು ಜಾಂಬವತಿಯನ್ನೂ, ಜಾಂಬವಂತನನ್ನೂ ಕರೆದುಕೊಂಡು ದ್ವಾರಕೆಗೆ ಬಂದು, ಶಮಂತಕ ಮಣಿ ಯನ್ನು ಸತ್ರಾಜಿತ್ತುವಿಗೆ ಕೊಟ್ಟು ನಡೆದ ಸಂಗತಿ ಯನ್ನೆಲ್ಲಾ ಹೇಳಿದನು.

ಸತ್ರಾಜಿತ್ತು ಪಶ್ಚಾತ್ತಾಪದಿಂದ "ಕೃಷ್ಣಾ, ಧನ ವನ್ನು ಕಳೆದುಕೊಂಡ ಪಾಪಾತ್ಮನಾಗಿ ನಾನು ಆಲೋಚನೆಯನ್ನೇ ಮಾಡದೆ ಮಹಾ ಅಪರಾಧ ಮಾಡಿಬಿಟ್ಟೆನು. ನನ್ನನ್ನು ನೀನು ಇಷ್ಟಬಂದ ಹಾಗೆ ದಂಡಿಸಿಬಿಡು" ಎಂದನು.

"ಇನ್ನೇಕೆ ಬೇರೆ ದಂಡನೆ? ನಿಮ್ಮ ಪಶ್ಚಾತ್ತಾಪವೇ ದಂಡನೆಯೂ ಆಯಿತು. ನನ್ನ ಅಪವಾದ ಹೋಯಿತು! ಸಂತೋಷವಾಯಿತು" ಎಂದನು ಕೃಷ್ಣ.

ಆಗ ಸತ್ರಾಜಿತ್ತು ತನ್ನ ಅಪಚಾರಕ್ಕೆ ಪರಿಹಾರ ರೂಪವಾಗಿ ತನ್ನ ಜೀವವೆಂದು ಭಾವಿಸಿದ ಶಮಂತಕ



ಮಣಿಯನ್ನೂ, ಸತ್ಯಭಾಮೆಯನ್ನೂ ಕೃಷ್ಣನ ಮುಂದಿರಿಸಿ ಸ್ವೀಕರಿಸಬೇಕೆಂದು ಕೇಳಿಕೊಂಡನು.

ಕೃಷ್ಣನು ಸತ್ಯಭಾಮೆಯ ಕೈಯನ್ನು ಹಿಡಿದು ಸ್ವೀಕರಿಸಿಕೊಂಡು ಶಮಂತಕ ಮಣಿಯನ್ನು ಸತ್ರಾಜಿತ್ತುವೇ ಇಟ್ಟುಕೊಳ್ಳಬೇಕೆಂದು ಹೇಳಿ ತಿರುಗಿ ಕೊಟ್ಟನು. ಅದನ್ನು ನೋಡಿ ಸತ್ಯಭಾಮೆ, ಕೃಷ್ಣನು ತನ್ನವನಾದನೆಂಬ ಆನಂದದೊಂದಿಗೆ ತಂದೆಯನ್ನು ನೋಡಿ, "ನೋಡಿದಿರಾ ಅಪ್ಪಾ, ನಾನು ಹೆಚ್ಚಿನವಳೋ, ಮಣಿ ಹೆಚ್ಚಿನದೋ ಎಂಬುದು ಈಗ ಗೊತ್ತಾಯಿತಷ್ಟೆ? ಇದೆಲ್ಲದಕ್ಕೂ ಮೂಲ ಕಾರಣನಾದ ವಿಘ್ನೇಶ್ವರನನ್ನು ಕೂಡಾ ಕಡಿಮೆ ಪಡಿಸಿ ಹಿಂದೊಮ್ಮೆ ಏನೋ ಹೇಳಿದಿರಿ. ವಿಘ್ನೇಶ್ವರನನ್ನು ನಂಬಿದವಳಾದ ನನ್ನ ಮನೋಭೀಷ್ಟ ಸಿದ್ಧಿಸಿತು ನೋಡಿದಿರಾ?" ಎಂದು ಕಣ್ಣುಮುಚ್ಚಿ ವಿಘ್ನೇಶ್ವರನನ್ನು ಧ್ಯಾನಿಸಿ ಕೈಮುಗಿದಳು. ಕೃಷ್ಣನೂ ಸತ್ರಾಜಿತ್ತುವೂ ವಿಘ್ನೇಶ್ವರನನ್ನು ಧ್ಯಾನಿಸಿ ಕೈಮುಗಿದರು.

ಅಷ್ಟು ಮಾತ್ರವಲ್ಲದೆ ಸತ್ರಾಜಿತ್ತು ತನ್ನದು ತಪ್ಪಾಯಿತೆಂದು ಕ್ಷಮೆ ಕೇಳುತ್ತ ಗಲ್ಲ ಬಡಿದು ಮಂಡಿಯೂರಿ ಮಣಿದನು.

"ಸತ್ಯಭಾಮೆಯ ಮಾತು ನಿಜ. ಎಲ್ಲವೂ ವಿಘ್ನೇಶ್ವರನ ಲೀಲೆಯೇ! ಶಮಂತಕ ಮಣಿಗಿಂತಲೂ ಮೌಲ್ಯ ಉಳ್ಳವಳು ಸತ್ಯಭಾಮಾಮಣಿ! ಗಣೇಶಾ! ಹೀಗೆಯೇ ದಯವಿಡು!" ಎಂದು ಕೃಷ್ಣನೂ ಕೈ ಜೋಡಿಸಿದನು.

ಆಗ ಆಕಾಶದಲ್ಲಿ ವಿಘ್ನೇಶ್ವರನು ಸೊಂಡಿಲಾಡಿಸುತ್ತ ಪ್ರತ್ಯಕ್ಷನಾಗಿ, "ಭಗವಂತನು ಸತ್ಯಕ್ಕೆ ವಶನಾಗಿರುವವನು. ಸತ್ಯವೆಂದರೆ ಅವನಿಗೆ ಅತ್ಯಂತ ಪ್ರಿಯ. ಸತ್ಯವೇ ಅವನ ಸೊತ್ತು. ಅದರ ಪ್ರತಿರೂಪವೇ ಸತ್ಯಭಾಮೆ. ಸತ್ಯಭಾಮಾ ಪರಿಣಯದಿಂದ ಕೃಷ್ಣನಿಗೆ ಸತ್ಯಾಪತಿ ಎಂಬ ಹೆಸರು ಬಂತು" ಎಂದು ಹೇಳಿ ಸತ್ಯಾ ಕೃಷ್ಣರ ಮೇಲೆ ಪುಷ್ಪಾಂಜಲಿಗರೆದನು.

"ಶಮಂತಕ ಮಣಿ ಕಥೆ ಕೇಳಿದವರಿಗೆ ಅಪನಿಂದೆಗಳು ಬಾರವು" ಎಂದು ಹೇಳಿ ವಿಘ್ನೇಶ್ವರನು ಅಂತರ್ಧಾನನಾದನು.

ಸತ್ರಾಜಿತ್ತು ಕೃಷ್ಣನ ಕಾಲು ತೊಳೆದು ಕನ್ಯಾದಾನ ಮಾಡುವ ತನ್ನ ಅದೃಷ್ಟಕ್ಕೆ ಉಬ್ಬಿಕೊಳ್ಳುತ್ತ ಸತ್ಯಭಾಮಾ ಕೃಷ್ಣರ ವಿವಾಹವನ್ನು ಮಹಾ ವೈಭವದಿಂದ ಜರುಗಿಸಿದನು. ಅದಾದ ಮೇಲೆ ಕೃಷ್ಣನು ಜಾಂಬವತಿಯನ್ನು ಕೂಡಾ ವಿವಾಹ ಮಾಡಿಕೊಂಡನು. ಜಾಂಬವಂತನು ಕೃಷ್ಣನೊಂದಿಗೆ, "ಕೃಷ್ಣಾ, ನೀನು ರಾಮಾವತಾರದಲ್ಲಿದ್ದಾಗ ನಿನ್ನೊಂದಿಗೆ ಯುದ್ಧ ಮಾಡಬೇಕೆಂದಿರುವ ನನ್ನ ಅಭಿಲಾಷೆಯನ್ನು ಹೇಳಿದ್ದೆನು. ನಿನ್ನಂತಹ ಅಳಿಯನನ್ನು ಸಂಪಾದಿಸಿದ ಜನಕಮಹಾರಾಜನ ಅದೃಷ್ಟಕ್ಕೆ ಅಸೂಯೆಯಾಗಿದೆ ಎಂತಲೂ ತಿಳಿಸಿದ್ದೆ. ನನ್ನ ಆ ಎರಡು ಕೋರಿಕೆಗಳನ್ನೂ ಈಗ ತೀರಿಸಿದೆಯಲ್ಲಾ! ನಾನೀಗ ಧನ್ಯನಾದೆ! ಜೀವನ್ಮುಕ್ತನಾದೆನು" ಎಂದು ಹೇಳಿ ತಪಸ್ಸು ಮಾಡಲಿಕ್ಕಾಗಿ ಅರಣ್ಯಕ್ಕೆ ಹೊರಟುಹೋದನು.

ಮುಂದೆ ಬೇಗದಲ್ಲಿ ಸತ್ರಾಜಿತ್ತು ಅಕಾಲಮರಣಕ್ಕೆ ತುತ್ತಾಗುವಂತಾಯಿತು. ಸತ್ಯಭಾಮೆ ಕೈ ತಪ್ಪಿದಳೆಂಬ ಸಿಟ್ಟಿನಿಂದ ಶತಧನ್ವನು ಸತ್ರಾಜಿತ್ತುವನ್ನು ಕೊಲೆ ಮಾಡಿ, ಶಮಂತಕಮಣಿಯನ್ನು ಅಪಹರಿಸಿಕೊಂಡು, ಕೃತವರ್ಮ ಮತ್ತು ಅಕ್ರೂರರ ಜತೆಯಲ್ಲಿ ಓಡಿ ಹೋದನು. ಕೃಷ್ಣನು ಸತ್ಯಭಾಮೆಯ ದುಃಖವನ್ನು ಸಮಾಧಾನಪಡಿಸಿ, ಶತಧನ್ವನನ್ನು ಹುಡುಕಿ ಹಿಡಿದು ಯುದ್ಧದಲ್ಲಿ ಕೊಂದನು. ಅಕ್ರೂರ, ಕೃತವರ್ಮರು ಮಣಿಯೊಂದಿಗೆ ಓಡಿಹೋದರು. ಕೃಷ್ಣನು ಅವರನ್ನೂ ಹುಡುಕಿ ಹಿಡಿದು ಮಣಿಯನ್ನು ವಶಪಡಿಸಿಕೊಂಡು ತಂದು ತಂದೆಯ ಜ್ಞಾಪಕಾರ್ಥವಾಗಿ ಇಟ್ಟುಕೊಳ್ಳುವಂತೆ ಸತ್ಯಭಾಮೆಗೆ ಕೊಟ್ಟನು.

ಅನಂತರ ಕೃಷ್ಣನು ಮಿತ್ರವಿಂದಾ, ಕಾಳಿಂದಿ, ಭದ್ರ, ನಾಗ್ನಜಿತಿ, ಲಕ್ಷಣ ಎಂಬ ಕನ್ಯೆಯರನ್ನು ಕೂಡಾ ಮದುವೆ ಮಾಡಿಕೊಂಡನು. ಎಂಟುಮಂದಿ ಹೆಂಡತಿಯರೊಂದಿಗೆ ಕೃಷ್ಣನು, ಭೋಗಭಾಗ್ಯಗಳೊಂದಿಗೆ ಸೊಗಸಾಗಿರಲು, ಪ್ರತಿವರ್ಷ ವಿನಾಯಕ ಚತುರ್ಥಿಯದಿನ ಸತ್ಯಭಾಮೆ ಎಲ್ಲರೊಂದಿಗೂ ಕೂಡಿ ವಿಘ್ನೇಶ್ವರನನ್ನು ಪೂಜಿಸುತ್ತಿದ್ದಳು.

ಶಮಂತಕಮಣಿಯ ಪ್ರಭಾವದಿಂದ ಸತ್ಯಭಾಮೆಯ ಅಂತಃಪುರದಲ್ಲಿ ಅಪಾರವಾಗಿ ಬಂಗಾರವು ತುಂಬಿಕೊಳ್ಳುತ್ತಿದ್ದಿತು. ಆದರಿಂದ ಸತ್ಯಭಾಮೆ ರತ್ನರಾಶಿಗಳನ್ನೂ ಅಮೂಲ್ಯ ಆಭರಣಗಳನ್ನೂ, ಬಂಗಾರದ ಜರಿಗಳ ಬಟ್ಟೆಗಳನ್ನೂ, ಇನ್ನೆಷ್ಟೋ ಅಲಂಕಾರಗಳನ್ನೂ ಮಾಡಿಸಿ ಅರಮನೆಯನ್ನು ಸೌಂದರ್ಯದಿಂದ ಜಗಜಗಿಸಿದಳು. ಅಷ್ಟಮಹಿಷಿಗಳಲ್ಲಿ ತಾನೇ ಐಶರ್ಯವಂತಳೆಂಬ ಸಂಪದ್ಗರ್ವವೂ, ತಾನೇ ಹೆಚ್ಚಿನವಳಾಗಿ ಕೃಷ್ಣನಿಗೆ ಎಲ್ಲರಿಗಿಂತ ತಾನೇ ಹೆಚ್ಚಿನವಳೆಂಬ ಅಹಂಭಾವವೂ ಅವಳಲ್ಲಿ ಕ್ರಮವಾಗಿ ತಲೆಯೆತ್ತುತ್ತಾ ಬೆಳೆಯಲು ತೊಡಗಿತು.



ಕೃಷ್ಣನ ಅಷ್ಟಮಹಿಷಿಯರಲ್ಲಿ ಜಾಂಬವತಿ ಮಹಾ ವೈಣಿಕ ವಿದ್ವಾಂಸಳಾಗಿದ್ದಳು, ನಾರದನು ತನ್ನ ಮಹತೀ ವೀಣೆಯನ್ನು ಮೀಟುತ್ತ, ಗಗನಮಾರ್ಗದಲ್ಲಿ ಹೋಗುತ್ತಿದ್ದಾಗ, ಯಾರೋ ಅವನನ್ನೇ ನೋಡಿ ಪರಿಹಾಸಮಾಡುವ ಹಾಗೆ ಗಹಗಹಿಸಿ ನಗುವುದು ಕೇಳಿಸಿತು.

"ಯಾರಿದು ನಗುವುದು ? ಏತಕ್ಕಾಗಿ ಈ ನಗು ?" ಎಂದು ನಾರದನು ನಾಲ್ಕು ದಿಕ್ಕುಗಳನ್ನೂ ನೋಡಿದನು.

"ನಾರದಾ ! ನಿನ್ನ ಮಹತೀ ವೀಣೆಯಲ್ಲಿ ನೀನಿನ್ನೂ ತುಂಬಾ ಕಲಿಯಲಿಕ್ಕಿದೆ. ನಿನ್ನ ವೀಣಾಗಾನಕ್ಕೆ ನೀನು ಆನಂದಿಸಿಕೊಳ್ಳುವುದನ್ನು ನೋಡಿ ನನಗೆ ನಗೆ ಬಂತು !" ಎಂದು ಆ ಅಶರೀರವಾಣಿ ಉತ್ತರಕೊಟ್ಟಿತು.

"ಏನಂದಿ ? ನನಗೆ ಕಲಿಸಿಕೊಡುವವರೂ ಇದ್ದಾರೇನು ?" ಎಂದು ನಾರದನು ತನಗೆ ತಾನೇ



ಪ್ರಶ್ನಿಸಿಕೊಳ್ಳಲು, ವಿಘ್ನೇಶ್ವರನು ಅವನ ಮುಂದೆ ಸಾಕ್ಷಾತ್ಕಾರಗೊಂಡು, "ಯಾಕಿಲ್ಲ? ಕೃಷ್ಣನ ಪತ್ನಿ ಜಾಂಬವತಿಯ ಹತ್ತಿರ ಹೋಗಿ ವೀಣಾವಾದ್ಯದ ಸೂಕ್ಷ್ಮ ತಂತುಗಳನ್ನೆಲ್ಲಾ ಚೆನ್ನಾಗಿ ಕಲಿತುಕೋ" ಎಂದನು.

ನಾರದನು ಕೃಷ್ಣನ ಅನುಗ್ರಹ ಪಡೆದು ಜಾಂಬವತಿಯಿಂದ ವೀಣಾನಾದದಲ್ಲಿರುವ ಸೂಕ್ಷ್ಮವಾದ ನಾದಾಲಾಪನೆಯ ವಿಧಾನಗಳನ್ನು ಕಲಿತು ಪ್ರವೀಣನಾದನು.

ಒಂದು ದಿನ ಕೃಷ್ಣನು ರುಕ್ಮಿಣಿಯ ಅಂತಃಪುರದಲ್ಲಿರುವಾಗ ದೇವಲೋಕದಿಂದ ಬಂದ ನಾರದನು ವಿಶೇಷ ಪರಿಮಳ ಬೀರುವ ಪಾರಿಜಾತ ಪುಷ್ಪವನ್ನು ತಂದು ಕೃಷ್ಣನಿಗೆ ಕೊಟ್ಟನು. ಕೃಷ್ಣನು ಅದನ್ನು ರುಕ್ಮಿಣಿಗೆ ಕೊಟ್ಟನು. ಈ ಸಂಗತಿಯನ್ನು ಕೇಳಿ ಸತ್ಯಭಾಮೆಗೆ ಸಿಟ್ಟು ಬಂದಿತು. ಅವಳು ಕೃಷ್ಣನೊಂದಿಗೆ ತನ್ನ ಸಿಟ್ಟನ್ನು ಪ್ರದರ್ಶಿಸಲು, ಕೃಷ್ಣನು ಅವಳನ್ನು ಸಮಾಧಾನಪಡಿಸಿ, ಅವಳೊಂದಿಗೆ ಗರುಡಾರೂಢನಾಗಿ ಸ್ವರ್ಗಕ್ಕೆ ಹೋಗಿ, ಅಲ್ಲಿಯ ನಂದನವನದಲ್ಲಿದ್ದ ಪಾರಿಜಾತ ವೃಕ್ಷವನ್ನೇ ತಂದು ಸತ್ಯಭಾಮೆಯ ಮನೆಯ ಹಿಂಭಾಗದಲ್ಲಿ ನೆಟ್ಟನು. ಆದರೂ ಕೃಷ್ಣನಿಗೆ ತನ್ನ ಮೇಲೆ ಪ್ರೇಮ ತಗ್ಗಿರುವುದೆಂದೇ ಸತ್ಯಭಾಮೆಗೆ ದಿಗಿಲು ಹಿಡಿದು ಕೊಂಡಿತ್ತು. ಪಾರಿಜಾತ ವೃಕ್ಷವೇ ಮನೆಗೆ ಬಂದರೂ ಅದು ತನ್ನ ಕೋಪದಿಂದ ಬಂದಿತೇ ಹೊರತು, ಕೃಷ್ಣನು ತಾನಾಗಿ ಕೊಟ್ಟುದಲ್ಲ. ಹೇಗಾದರೂ ಮಾಡಿ ಕೃಷ್ಣನನ್ನು ತನ್ನ ಮಂದಿರದಲ್ಲೇ ಇರಿಸಿಕೊಳ್ಳುವ ಹಾಗೆ ಮಾಡಿಕೊಂಡರೇನೇ ಅವಳ ಮನಸ್ಸಿಗೆ ಶಾಂತಿ.

ಅಂತಲೇ ಒಂದು ದಿನ ನಾರದನು ಅದಳ ಮನೆಗೆ ಬಂದಾಗ, ತನ್ನ ಹೃದ್ಗತವನ್ನು ಅವನೊಡನೆ ಹೇಳಿದಳು. ಪುಣ್ಯಕ ವ್ರತವನ್ನು ಆಚರಿಸಿದರೆ ಕೃಷ್ಣನು ಅವಳ ಅಧೀನದಲ್ಲೇ ಇರುವನೆಂದು ನಾರದನು ಹೇಳಿದನು. ಸತ್ಯಭಾಮೆ ಆ ವ್ರತಕ್ಕೆ ಪ್ರಾರಂಭಿಸಿ, ಅದರಲ್ಲಿ ಬರುವ ನಿಯಮದ ಪ್ರಕಾರ ಕೃಷ್ಣನನ್ನು ನಾರದನಿಗೆ ದಾನವಾಗಿ ಕೊಟ್ಟಳು. ಅನಂತರ ತನಗೆ ಕೃಷ್ಣನಷ್ಟು ಭಾರದ ಬಂಗಾರವನ್ನು ಕೊಟ್ಟರೆ ಕೃಷ್ಣನನ್ನು ಬಿಟ್ಟು ಕೊಡುವುದಾಗಿ ನಾರದನು ಹೇಳಿದ್ದನು.

ಸತ್ಯಭಾಮೆ ತನ್ನ ಮನೆಯಲ್ಲಿರುವ ಬಂಗಾರವನ್ನೆಲ್ಲಾ ಕೃಷ್ಣತುಲಾಭಾರಕ್ಕೆ ಹಾಕಿದಳು, ಶಮಂತಕ ಮಣಿಯನ್ನೂ ಹಾಕಿದ್ದಾಯಿತು. ಆದರೂ ಕೃಷ್ಣನ ತಕ್ಕಡಿತಟ್ಟೆ ಮೇಲೇಳಲಿಲ್ಲ. ಆಗ ಸತ್ಯಭಾಮೆ ಗರ್ವವನ್ನು ಬಿಟ್ಟು, ರುಕ್ಮಿಣಿಯೊಂದಿಗೆ ತನ್ನ ಸಮಸ್ಯೆಯನ್ನು ಹೇಳಿ ಇದಕ್ಕೆ ಏನು ಮಾಡುವುದೆಂದು ಕೇಳಿದಳು.

"ತಂಗೀ, ಕೃಷ್ಣನೊಂದಿಗೆ ಸರಿದೂಗುವ ಸಂಪತ್ತೆಂದರೆ ಭಕ್ತಿಯೊಂದೇ! ಭಕ್ತಿಪೂರ್ವಕವಾಗಿ ಒಂದು ತುಲಸೀದಳವನ್ನು ಹಾಕಿದರೂ ಸಾಕು"

ಎಂದು ಹೇಳಿ ಸತ್ಯಭಾಮೆಯ ಕೈಗೆ ಒಂದು ದಳ ತುಲಸಿಯನ್ನು ತಂದು ಕೊಟ್ಟಳು.

ಸತ್ಯಭಾಮೆ ಆ ತುಲಸೀದಳವನ್ನು ಭಕ್ತಿಯಿಂದ ಧ್ಯಾನಿಸುತ್ತ ತಕ್ಕಡಿ ತಟ್ಟೆಯಲ್ಲಿ ಹಾಕಿದಳು. ಕೂಡಲೇ ಕೃಷ್ಣನು ಕುಳಿತ ತಟ್ಟೆ ಮೇಲಕ್ಕೆದ್ದು ಸಮಾನ ತೂಕ ತೋರಿಸಿತು. ಆಗ ನಾರದನು ತುಲಸೀದಳವನ್ನು ಮಾತ್ರ ತೆಗೆದುಕೊಂಡು, ಕೃಷ್ಣನನ್ನು ಸತ್ಯಭಾಮೆಯ ಪರಮಾಡಿ ಹೊರಟು ಹೋದನು.

ಕೃಷ್ಣತುಲಾಭಾರದಿಂದ ಸತ್ಯಭಾಮೆಗೆ ಜ್ಞಾನೋದಯವಾಯಿತು. ಐಶ್ವರ್ಯದ ಮೇಲೆ ವ್ಯಾಮೋಹವು ಹೋಯಿತು. ಕೃಷ್ಣನೇ ತನ್ನ ಪರಮೈಶ್ವರ್ಯವೆಂಬ ಮಹಾಭಕ್ತಿ ಭಾವ ಉಂಟಾಯಿತು.

ಶಮಂತಕ ಮಣಿಯಿಂದ ಲಭ್ಯವಾಗಿದ್ದ ಬಂಗಾರವನ್ನೆಲ್ಲಾ ಕೃಷ್ಣನು ಹೇಳಿದಂತೆ ಸತ್ಯಭಾಮೆ ಯಾತ್ರಿಕರಿಗೂ, ಪ್ರಯಾಣಿಕರಿಗೂ ಭೋಜನ ವಸತಿ ಸೌಕರ್ಯಗಳು ಕೂಡಿದ ಧರ್ಮಶಾಲೆಗಳನ್ನು ದೇಶದೊಳಗೆಲ್ಲಾ, ತಂದೆಯ ಸ್ಮೃತಿಚಿಹ್ನೆಗಳಾಗಿರುವಂತೆ ಏರ್ಪಡಿಸಿದಳು. ಆ ಧರ್ಮಶಾಲೆಗಳು ಸತ್ರಾಜಿತ್ತುವಿನ ಹೆಸರು ಸ್ಫುರಿಸುವಂತೆ "ಸತ್ರ" ಗಳೆಂದೂ ಕರೆಯಲ್ಪಟ್ಟುವು.

ಅನಂತರ ಮುಂದೆ ಕೃಷ್ಣ ಬಲರಾಮರ ತಂಗಿಯಾದ ಸುಭದ್ರೆಗೆ ಅರ್ಜುನನೊಂದಿಗೆ ವಿವಾಹ ನಡೆದಾಗ, ಸತ್ಯಭಾಮೆ ಶಮಂತಕಮಣಿಯನ್ನು ಸುಭದ್ರೆಗೆ ಉಡುಗೊರೆಯಾಗಿ ಕೊಟ್ಟಳು. ಹೀಗೆ ಆ ಮಣಿ ಪಾಂಡವರಿಗೆ ದೊರೆಯಿತು.

ಆ ಮಣಿಯಿಂದ ಶೇಖರಿಸಲ್ಪಟ್ಟ ಬಂಗಾರವು ಧರ್ಮರಾಜನ ರಾಜಸೂಯಯಾಗಕ್ಕೆ ಚೆನ್ನಾಗಿ ಉಪಯೋಗಪಟ್ಟಿತು. ತರುವಾಯ ಧರ್ಮರಾಜನು ಜೂಜಾಡಿ, ತಾನು ಮಾತ್ರವಲ್ಲದೆ ತಮ್ಮಂದಿರನ್ನೂ, ದ್ರೌಪದಿಯನ್ನೂ ಪಣವೊಡ್ಡಿ ಸೋತು ಹೋದನು. ದುರ್ಯೋಧನನು ದ್ರೌಪದಿಯನ್ನು ಅವಮಾನಪಡಿಸಿದನು. ಕಡೆಗೆ ಪಾಂಡವರು ವನವಾಸಕ್ಕೆ ಹೋದರು. ಈ ಎಲ್ಲಾ ದುಷ್ಪರಿಣಾಮಗಳಿಗೂ ಶಮಂತಕಮಣಿಯೇ ಕಾರಣವೆಂದು ಪಾಂಡವರ ಪುರೋಹಿತನಾದ ಧೌಮ್ಯನಿಗೆ ತೋರಿತು. ಅಂತಲೇ ಅದನ್ನು ವಿಸರ್ಜಿಸಬೇಕೆಂದು ಧೌಮ್ಯನು ಹೇಳಲು, ಅರ್ಜುನನು ಅದನ್ನು ತನ್ನ ಬಿಲ್ಲಿಗೆ ಸಂಧಿಸಿ ಬಲವಾಗಿ ಭೂಮಿಯ ಕಡೆಗೆ ಹೊಡೆದನು. ಶಮಂತಕಮಣಿ ಭೂಗರ್ಭದೊಳಗೆ ನಿಕ್ಷಿಪ್ತವಾಗಿ ಹೋಯಿತು.

ಪಾಂಡವರು ವನವಾಸದನಂತರ, ಅಜ್ಞಾತವಾಸಕ್ಕೆ ಹೊರಡುವಾಗ ನಾರದನು ಬಂದು, ಆದಿಪೂಜಕನಾದ ವಿಘ್ನೇಶ್ವರನನ್ನು ವ್ರತ ಹಿಡಿದು ಪೂಜಿಸಿ, ಅಜ್ಞಾತವಾಸ ಕೈಗೊಳ್ಳುವಂತೆ ಹೇಳಿದನು.






೫

**ಹ**ಸನ್ ತನ್ನ ಮನಮೆಚ್ಚಿದ ಮಡದಿಯಾದ ಗಂಧರ್ವೇಂದ್ರನ ಮಗಳ ಜತೆಯಲ್ಲಿ ನಲುವತ್ತು ದಿನಗಳನ್ನು ಕಳೆದನು. ಆಮೇಲೆ ಅವನಿಗೆ ತನ್ನ ತಾಯಿಯ ನೆನಪು ಬರಲಾರಂಬಿಸಿತು. ಒಂದು ದಿನ ರಾತ್ರಿ ಸ್ವಪ್ನದಲ್ಲಿ ಅವನ ತಾಯಿ ಕಾಣಿಸಿ ಅವನನ್ನು ವಾತ್ಸಲ್ಯದ ಹುಸಿ ಮುನಿಸಿನಿಂದ ನಿಂದಿಸಿದಳು. ಆಗ ಹಸನ್ನನು ಗಟ್ಟಿಯಾಗಿ ಅಳುತ್ತಾ ಕಣ್ಣೀರು ಸುರಿಸಿಕೊಂಡು ನಿದ್ರೆಯಿಂದೆದ್ದನು. ಅದನ್ನು ನೋಡಿ ಏನಾಯಿತೋ ಎಂದುಕೊಂಡು ಅವನ ಅಕ್ಕಂದಿರೆಲ್ಲಾ ಗಾಬರಿಯಾಗಿ ಓಡೋಡಿ ಬಂದರು. ಹಸನ್ನನ ಹೆಂಡತಿಗೆ ಕೂಡಾ ಅವನ ದುಃಖದ ಕಾರಣ ತಿಳಿಯಲಿಲ್ಲ.

ಹಸನ್ ತನಗೆ ಬಂದ ಸ್ವಪ್ನದ ಸಂಗತಿಯನ್ನು ಹೇಳಿದನು. ಅದನ್ನು ಕೇಳಿ ಅವನ ಸಣ್ಣಕ್ಕ, "ಹೌದೌದು. ಇನ್ನು ಮೇಲೆ ನಿನ್ನನ್ನು ಇಲ್ಲಿಯೇ ಇರಿಸಿಕೊಳ್ಳುವುದು ಬಹಳ ತಪ್ಪು. ಅಮ್ಮನ ಪ್ರೀತಿ ಎಲ್ಲಕ್ಕಿಂತ ದೊಡ್ಡದೇ. ತಮ್ಮಾ, ನೀನು ತಾಯಿಯ ಬಳಿಗೆ ಹೋಗಲೇಬೇಕು. ಆದರೆ ವರ್ಷಕ್ಕೊಮ್ಮೆ ಇಲ್ಲಿಗೆ ಬಂದು ಕೆಲವು ದಿನ ನಮ್ಮೊಂದಿಗಿದ್ದು ಹೋಗುವೆನೆಂದು ಮಾತುಕೊಡಬೇಕು" ಎಂದಳು. ಹಾಗೆಯೇ ಹಸನ್ನನ ಪ್ರಯಾಣ ಸನ್ನಾಹ ಪೂರ್ತಿಯಾಯಿತು. ಇನ್ನು ಹೋಗುವುದು ಹೇಗೆ ಎಂಬ ಸಮಸ್ಯೆ ಇದಿರಾಯಿತು, ಆಗ ಹಸನ್ನನಿಗೆ ಬೆಹ್ರಾಂನಿಂದ ಕಿತ್ತುಕೊಂಡ ತಮಟೆಯ ಸಂಗತಿ ನೆನಪಾಯಿತು. ಅದನ್ನು ಹೇಗೆ ಬಾರಿಸಬೇಕೆಂದು ಸಣ್ಣಕ್ಕ ಅವನಿಗೆ ಕಲಿಸಿದಳು. ಹಸನ್ ಅದನ್ನು ಬಾರಿಸಿದಕೂಡಲೇ ಅಗಣಿತ ಸಂಖ್ಯೆಯಲ್ಲಿ ಒಂಟೆಗಳೂ, ಕುದುರೆಗಳೂ, ಕತ್ತೆಗಳೂ ಹಾರಿ ಹಾರಿ ಬಂದು ಸಾಲಾಗಿ ನಿಂತುವು. ಅವುಗಳಲ್ಲಿ ಉತ್ತಮವಾದುವುಗಳನ್ನು ಅಗತ್ಯಕ್ಕೆ ಬೇಕಾದಷ್ಟು ಇರಿಸಿಕೊಂಡು, ಉಳಿದುವುಗಳನ್ನು ತಮಟೆ ಬಾರಿಸಿ ಕಳುಹಿಸಿ ಬಿಟ್ಟನು. ಆಮೇಲೆ ಹಸನ್ ತನ್ನ ಅಕ್ಕಂದಿರು ಕೊಟ್ಟ ಬಹುಮಾನಗಳನ್ನು ಪಡೆದುಕೊಂಡು, ಹೋಗಿ ಬರುತ್ತೇನೆಂದು ಹೇಳಿ, ಹೆಂಡತಿಯಾದ ಗಂಧರ್ವೇಂದ್ರ ಕುಮಾರಿಯೊಂದಿಗೆ ತನ್ನ ಮನೆಗೆ ಹೊರಟನು.



ಆವನ ಘನ ಶ್ರೀಮಂತಿಕೆಯ ಪ್ರಯಾಣವು ಶರ ವೇಗದಿಂದ ಸಾಗಿ, ಕೆಲವೇ ನಿಮಿಷಗಳಲ್ಲಿ ಮುಗಿಯಿತು. ಹಸನ್ ಬಸ್ರಾ ನಗರದ ತನ್ನ ಮನೆಯ ಮುಂದೆ ಇಳಿದ ಕೂಡಲೇ, ಒಳಗಿನಿಂದ ಅವನ ತಾಯಿಯ ರೋದನ ಧ್ವನಿ ಕೇಳಿಸಿಕೊಂಡಿದ್ದಿತು. ಆಗ ಹಸನ್ನಿಗೂ ಕಣ್ಣೀರು ಬರಲಾರಂಭಿಸಿ ಶೋಕಿಸುತ್ತಾ ಮನೆಯ ಬಾಗಿಲನ್ನು ತಟ್ಟಿದನು. ಹಸನ್ನನ ತಾಯಿ ಎದ್ದು ಬಂದು ಬಾಗಿಲು ತೆರೆದು ತನ್ನ ಮಗನನ್ನು ನೋಡಿದ ಕೂಡಲೇ, "ಹಾ !" ಎಂದು ಕೂಗಿ ನಿಟ್ಟುಸಿರುಬಿಟ್ಟು ಮೂರ್ಛೆ ಹೋಗಿ ಬೀಳುವಾಗ ಹಸನ್ ಹಿಡಿದನು.

ಅವನು ತನ್ನ ಹೆಂಡತಿಯೊದಿಗೆ ತಾಯಿಗೆ ಉಪಚಾರಗಳನ್ನು ಮಾಡುತ್ತ, ಬೇಗದಲ್ಲೇ ಅವಳಿಗೆ ಎಚ್ಚರ ಬರಿಸಿದನು. ತಾಯಿ ಮಗಂದಿರೊಳಗೆ ಮಾತುಕತೆ ಪ್ರಾರಂಭವಾಯಿತು. ಹಸನ್ ತನ್ನ ಹೇಡತಿಯನ್ನು ತಾಯಿಗೆ ಪರಿಚಯ ಮಾಡಿಸಿದನು. ತನ್ನ ಸೊಸೆಯನ್ನು ನೋಡಿ ಅವಳು ಅತ್ಯಂತ ಆನಂದಗೊಂಡಳು. ಈ ಹುಡುಗಿ ಗಂಧರ್ವ ಮಹಾರಾಜನ ಮಗಳೆಂದು ತಿಳಿದು ಅವಳ ಬುದ್ಧಿಗೆ ಕತ್ತಲೆ ಕವಿಯಿತು. ಇಂತಹ ಹುಡುಗಿಗೆ ಎಂತಹ ಮರ್ಯಾದೆ ಮಾಡಬೇಕೆಂದು ಅವಳಿಗೆ ಗೊತ್ತಾಗ ಲಿಲ್ಲ. ಹಸನ್ನನ ತಾಯಿ ಆ ಕೂಡಲೇ ಮನೆಯಿಂದ ಹೊರಟು ಅಂಗಡಿಗೆ ಹೋಗಿ, ಅಲ್ಲಿರುವ ಬಟ್ಟೆಗಳಲ್ಲಿ ಅತೀ ಶ್ರೇಷ್ಠವಾವುದೋ ಅವುಗಳನ್ನು ಆರಿಸಿ ಮನೆಗೆ ತಂದು, ಅವನ್ನೆಲ್ಲಾ ಒಂದೇ ಬಾರಿಗೆ ಸೊಸೆಯ ಮೇಲೆ ಹಾಕಿ ಹೊದೆಯಿಸಿದಳು. ರುಚಿರುಚಿಯಾದ ಆಡಿಗೆಗಳನ್ನು ಮಾಡಿ ಸೊಸೆಗೆ ಸ್ವತಃ ತಿನಿಸಿದಳು.

ಕಡೆಗೆ ಅವಳು ತನ್ನ ಮಗನನ್ನು ನೋಡಿ, "ಕಂದಾ, ನಿನ್ನ ಹೆಂಡತಿ ವಾಸವಾಗಿರಲಿಕ್ಕೆ ಈ ಬಸ್ರಾ ನಗರವು ಏನೇನೂ ಯೋಗ್ಯವಾಗಿಲ್ಲಪ್ಪಾ, ಈ ಊರಲ್ಲಿ ನಾವು ಬಡತನದಲ್ಲೇ ಬಾಳಿದವರು. ಆದುದರಿಂದ ನಾವು ನಮ್ಮ ಬೀಡನ್ನು ಬಾಗ್ದಾದಿಗೆ ಬದಲಾಯಿಸಬೇಕು. ದೊಡ್ಡ ಅಮೀರರೆಂದು ಹೇಳಿ ಕೊಂಡು ಅಲ್ಲಿ ಬದುಕಬಹುದು. ಅದೇ ಒಳ್ಳೆಯದು. ಹೊರಟು ಬಿಡೋಣ" ಎಂದಳು.

ತಾಯಿಯ ಆಲೋಚನೆ ಹಸನ್ನನಿಗೆ ಹಿಡಿಸಿತು. ಅವನು ತನ್ನ ಮನೆಯನ್ನು ಎಲ್ಲಾ ಸಾಮಾನು ಗಳೊಂದಿಗೆ ಮಾರಿ, ತನ್ನ ಹತ್ತಿರವಿರುವ ಮಂತ್ರದ ತಮಟೆಯ ಸಹಾಯದಿಂದ ಬಾಗ್ದಾದನ್ನು ಸೇರಿದನು. ಅವನು ನಗರದೊಳಗೆ ಹೋಗಿ, ದಳಾಳಿಗಳ ದ್ವಾರಾ ಒಂದು ದಿವ್ಯವಾದ ಮಹಾಭವನವನ್ನು ಲಕ್ಷ ದೀನಾರಗಳನ್ನು ಕೊಟ್ಟುಕೊಂಡುಕೊಂಡನು. ಆ ಭವನಕ್ಕೆ ತಕ್ಕ ಹಾಗೆ ಬೇಕಾದ ಅಲಂಕಾರಗಳನ್ನೂ, ವಸ್ತು ಸಾಮಗ್ರಿಗಳನ್ನೂ ಅಳವಡಿಸಿ, ನಗರದ ಪ್ರಮುಖರಿಗೆ ಔತಣಕ್ಕೆ ಏರ್ಪಾಡುಮಾಡಿಸಿ, ತಾಯಿ ಯೊಂದಿಗೂ, ಹೆಂಡತಿಯೊಂದಿಗೂ ಗೃಹಪ್ರವೇಶ ಮಾಡಿದನು. ಅವನು ಎಷ್ಟುಮಂದಿ ದಾಸ ದಾಸಿಯರನ್ನು ಇರಿಸಿಕೊಂಡನೆಂದರೆ, ಅವನ

ಪರಿವಾರವನ್ನು ಮೀರಿಸುವ ಪರಿವಾರಗಳು ಬಾಗ್ದಾದಿನಲ್ಲಿ ಅತ್ಯಪೂರ್ವವೆಂದು ಎಲ್ಲರೂ ಹೇಳಿಕೊಳ್ಳುತ್ತಿದ್ದರು. ಹೀಗೆ ದೊಡ್ಡ ಭೋಗಭಾಗ್ಯಗಳಿಂದ ಸುಖವಾಗಿರುತ್ತ, ಮುಂದಿನ ಹತ್ತನೇ ತಿಂಗಳಿನಲ್ಲಿ ಆವನ ಹೆಂಡತಿ ಅವಳಿ ಜವಳಿಗಳಾದ ಗಂಡು ಮಕ್ಕಳನ್ನು ಹೆತ್ತಳು. ಹುಣ್ಣಿಮೆಯ ಚಂದ್ರರಂತೆ ಬೆಳಗುತ್ತಿದ್ದ ಆ ಮಕ್ಕಳಿಗೆ ನಾಸಿರ್, ಮನ್ಸೂರ್ ಎಂದು ನಾಮಕರಣ ಮಾಡಲಾಯಿತು.

ಒಂದು ವರ್ಷವಾಗುವಷ್ಟರಲ್ಲಿ ಹಸನ್ನಿಗೆ ತಾನು ತನ್ನ ಪ್ರೀತಿಯ ಸಣ್ಣಕ್ಕನಿಗೆ ಕೊಟ್ಟ ಮಾತು ನೆನಪಿಗೆ ಬಂತು. ಕೂಡಲೇ ಪ್ರಯಾಣಕ್ಕೆ ಸನದ್ಧನಾಗುತ್ತ, ಆಕ್ಕಂದಿರಿಗೆಲ್ಲಾ ತಕ್ಕುದಾದ ಕಾಣಿಕೆಯ ವಸ್ತುಗಳನ್ನು ಕೊಂಡುಕೊಂಡನು. ಆಮೇಲೆ ತಾಯಿಯೊಂದಿಗೆ ತನ್ನ ಪ್ರಯಾಣವನ್ನು ಕುರಿತು ಹೇಳಿ, "ಅಮ್ಮಾ, ಎಲ್ಲದಕ್ಕಿಂತಲೂ ಮುಖ್ಯವಾದೊಂದು ಸಂಗತಿ ಹೇಳುತ್ತೇನೆ ಕೇಳು. ನಿನ್ನ ಸೊಸೆಯ ಪಕ್ಷಿಯ ತೊಡುಗೆಯನ್ನು ರಹಸ್ಯ ಸ್ಥಳದಲ್ಲಿ ಅಡಗಿಸಿಟ್ಟಿದ್ದೇನೆ. ನಾನು ಹಿಂದಿರುಗಿ ಬರುವವರೆಗೂ ಅದನ್ನು ಪ್ರಾಣ ಸಮಾನವಾಗಿ ಕಾಪಾಡಬೇಕು. ಅವಳಿಗೆ ಸ್ವಲ್ಪ ಪಕ್ಷಿಯ ಗುಣ ಇದ್ದೇ ಇದೆ. ಅಪ್ಪಿತಪ್ಪಿ ಅವಳು ಆ ತೊಡುಗೆಯನ್ನು ನೋಡಿಬಿಟ್ಟರೆ ತೀರಿತು. ಬೇರೆ ಯಾವ ಬಂಧನಗಳೂ ಅವಳನ್ನು ನಿವಾರಿಸಲಾರವು. ಅವಳಿಗೆ ಹಾರಿ ಹೋಗಬೇಕೆಂಬ ಆಸೆ ಪ್ರಬಲವಾಗಿ ಬಂದೇ ಬರುತ್ತದೆ, ಹೊರಟುಹೋಗಿ ಬಿಟ್ಟರೆ ತಿರುಗಿ ಬರುವವಳಲ್ಲ. ಅವಳು ಹೋಗಿ ಬಿಟ್ಟರೆ ನಾನು ಮನೋವ್ಯಾಧಿಯಿಂದ ಸತ್ತು ಹೋದೇನು. ಉಳಿದ ವಿಷಯಗಳಲ್ಲಿ ಕೂಡಾ ಅವಳನ್ನು ಜಾಗ್ರತೆಯಿಂದಲೂ ಶ್ರದ್ಧೆಯಿಂದಲೂ ನೋಡಿಕೋ. ಅವಳು ಮುದ್ದಾಗಿ ಬೆಳೆದ ಹುಡುಗಿ. ಉಪಚಾರಗಳನ್ನೇ ಪಳಗಿಸಿಕೊಂಡವಳು. ಈ ವಿಷಯಗಳನ್ನೆಲ್ಲಾ ತಪ್ಪಿ ಕೂಡಾ ಮರೆತು ಬಿಡಬೇಡ ಅಮ್ಮಾ! ಜಾಗ್ರತೆ!" ಎಂದು ಎಚ್ಚರಿಸಿ ಹೇಳಿದನು,

"ಜಾಗರೂಕತೆಯನ್ನು ನನಗೆ ಕಲಿಸಿ ಕೊಡಬೇಕೇ ಮಗಾ? ವಯಸ್ಸಾಗಿ ಹೋದುದರಿಂದ ನನ್ನ





ಬುದ್ಧಿ ಜಡವಾಗಿ ಹೋಯಿತೆಂದುಕೊಂಡೆಯಾ? ನೀನು ನಿಶ್ಚಿಂತನಾಗಿ ಹೋಗಿಬಾರಪ್ಪ. ನಾನು ನಿನ್ನ ಹೆಂಡತಿಯನ್ನು ಹೇಗೆ ನೋಡಿಕೊಳ್ಳಬೇಕೋ ಹಾಗೆ ನೋಡಿಕೊಳ್ಳುತ್ತೇನೆ. ನಾನು ಹೇಳುವುದೆಲ್ಲಾ ಒಂದೇ, ಸಾಧ್ಯವಾದಷ್ಟು ಬೇಗನೇ ಹಿಂದಿರುಗಿ ಬಂದು ಬಿಡು" ಎಂದಳು ತಾಯಿ.

ಆದರೆ ಪಾಪ, ಬರಲಿರುವುದೇನೆಂದು ಅವರಿಬ್ಬರಿಗೂ ತಿಳಿಯದು. ತಮ್ಮ ಸಂಭಾಷಣೆಯನ್ನು ಗಂಧರ್ವೇಂದ್ರನ ಮಗಳು ಕೇಳಿಕೊಂಡಿದ್ದಳೆಂಬ ಸಂಗತಿಯನ್ನೂ ಅವರಿಬ್ಬರೂ ಅರಿಯರು.

ಹಸನ್ ತನ್ನ ಹೆಂಡತಿಯನ್ನೂ, ಮಕ್ಕಳನ್ನೂ ಮುದ್ದಾಡಿ, ಹೊರಟುಹೋದನು. ಅವನು ಬೆಟ್ಟದ ಮೇಲಿನ ಅರಮನೆಗೆ ಸೇರಿದ ಕೂಡಲೇ ಅಲ್ಲಿದ್ದ ಅವನ ಅಕ್ಕಂದಿರಿಗಾದ ಆನಂದಕ್ಕೆ ಪಾರವೇ ಇರಲಿಲ್ಲ. ಮುಖ್ಯವಾಗಿ ಸಣ್ಣಕ್ಕನ ಸಂತೋಷ ಸಂಭ್ರಮವನ್ನು ಹೇಳಿ ತೀರದು. ಅವಳು ತಮ್ಮ ಭವನವನ್ನು ಹೂಮಾಲೆಗಳಿಂದಲೂ, ಬಣ್ಣದ ದೀಪಗಳಿಂದಲೂ ಅಲಂಕರಿಸಿದಳು. ಹಸನ್ ಅಕ್ಕನೊಂದಿಗೆ ತನಗೆ ಅವಳಿ ಜವಳಿ ಮಕ್ಕಳು ಹುಟ್ಟಿದ ವಿಷಯವನ್ನು ಬಲು ಹೆಮ್ಮೆಯಿಂದ ಹೇಳಿದನು. ಅಕ್ಕಂದಿರೊಂದಿಗೆ ತಮಾಷೆಯಾಗಿ ಬೇಟೆಗೂ ಹೋದನು. ಅವರೊಂದಿಗೆ ಕೂಡಿ ಅನೇಕ ಆಟಗಳಲ್ಲಿ ಪಾಲುಗೊಂಡನು. ಹೀಗೆ ತುಂಬ ಸಂತೋಷದಲ್ಲಿ ಅವನಿದ್ದನು.

ಹಸನ್ ಹೊರಟು ಹೋದಮೇಲೆ ಅವನ ಹೆಂಡತಿ ಎರಡು ದಿನಗಳವರೆಗೆ ಅತ್ತೆಯನ್ನು ಅಂಟಿಕೊಂಡೇ ಇದ್ದಳು. ಮೂರನೇ ದಿನ ಬೆಳಿಗ್ಗೆ ಅವಳು ಅತ್ತೆಯೊಂದಿಗೆ, "ಅತ್ತೆಯವರೇ, ನನಗೆ ಸ್ನಾನ ಶಾಲೆಗೆ ಹೋಗಿ ಬರಬೇಕೆಂದು ಆಸೆ. ಒಳ್ಳೆಯ ಸ್ನಾನಮಾಡಿ ಎಷ್ಟೋ ಕಾಲವಾಯಿತು" ಎಂದಳು.

"ಅದಕ್ಕೇನು ಬಿಡಮ್ಮಾ, ಅವನು ಬರಲಿ. ನಮಗೆ ಈ ಊರು ಹೊಸದು. ಸ್ನಾನಶಾಲೆ ಎಲ್ಲಿರುವುದೆಂದು ಕೂಡಾ ನಾನರಿಯೆ. ಮುಂದಾಗಿ ಹೋಗಿ ಅದಕ್ಕೆ ಏರ್ಪಾಡು ಮಾಡಲು ನಂಬುಗೆಯವರಾಗಿ ಯಾರಿದ್ದಾರೆ? ಮುದುಕಿಯಾದ ನಾನು ನಿನ್ನ ಜತೆಯಲ್ಲಿ ಬರುವುದು ಹೇಗೆ ಹೇಳು. ಬೇಕಾದರೆ ಸುಖವಾಗಿ ನೀರೆರೆದುಕೊಳ್ಳಲಿಕ್ಕೆ ಬೇಕಾದುದನ್ನೆಲ್ಲಾ ಮನೆಯಲ್ಲೇ ಮಾಡಿಸಿ ಬಿಡುತ್ತೇನೆ. ಒಳ್ಳೆಯ ಬಿಸಿ ನೀರು ಕಾಯಿಸುತ್ತೇನೆ. ಮನೆಯಲ್ಲೇ ಹಾಯಾಗಿ ಸ್ನಾನಮಾಡಮ್ಮ. ಯಾವ ಕಷ್ಟವೂ ಇಲ್ಲ" ಎಂದಳು ಹಸನ್ನನ ತಾಯಿ.

"ಎಲ್ಲಾ ಸೌಕರ್ಯಗಳಿರುದ ಸ್ನಾನಶಾಲೆಗೆ ಹೋಗಿಬರಲು ಅಭ್ಯಂತರ ಹೇಳುವುದೆಂದರೇನಿದು ಅತ್ತೆಯವರೇ? ಗುಲಾಮರಿಗೆ ಕೂಡಾ ಇಷ್ಟೊಂದು ಕಟ್ಟು ಬಂಧಗಳಿಲ್ಲವಲ್ಲಾ! ಇಷ್ಟೊಂದು ಗೃಹ ಬಂಧನದಲ್ಲಿರುವುದಕ್ಕಿಂತ ಸಾಯುವುದು ಒಳ್ಳೇದಲ್ಲವೇ?" ಎಂಬ ಸಂತಾಪದ ಬಿಸೀ ಮಾತುಗಳು ಹೊರಟಿತು ಹಸನ್ನನ ಹೆಂಡತಿಯ ಬಾಯಿಯಿಂದ.

ತನ್ನ ಸೊಸೆ ಅಷ್ಟೊಂದು ವೈರಾಗ್ಯದ ಭಾವದ ಮಾತು ಹೇಳಿದುದನ್ನು ಕೇಳಿ ಮುದುಕಿ ನೊಂದುಕೊಂಡಳು. ಗಂಡನಿಲ್ಲದ ಬೇಸರವೇ ಹಾಗಾಗಲು ಕಾರಣವೆಂದು ಅವಳಿಗೆ ತೋರಿತು. ಕೂಡಲೇ ಅವಳು ಸ್ನಾನಾ ನಂತರ ಧರಿಸಬೇಕಾದ ಬಟ್ಟೆಗಳನ್ನೂ ಹಚ್ಚಿಕೊಳ್ಳುವ ಅತ್ತರು ಮೊದಲಾದ ಪರಿಮಳ ದ್ರವ್ಯಗಳನ್ನೂ ತೆಗೆದುಕೊಂಡು, "ಹೊರಡಮ್ಮಾ, ನನ್ನ ಬಂಗಾರ ! ನಿನ್ನ ಇಷ್ಟ ಪ್ರಕಾರವೇ ಆಗಲಿ. ನಿನ್ನ ಗಂಡನಿಗೆ ಕೋಪಬಾರದಂತೆ ನೋಡುವ ಭಾರ ಅಲ್ಲಾನಿಗೇ !" ಎಂದು ಹೇಳಿ ಸೊಸೆಯನ್ನು ಕರೆದುಕೊಂಡು, ಸ್ನಾನಶಾಲೆಗಳಲ್ಲೆಲ್ಲಾ ಪ್ರಸಿದ್ಧವಾದುದಾವುದೆಂದು ವಿಚಾರಿಸಿ ಅಲ್ಲಿಗೆ ಕರೆದುಕೊಂಡು ಹೋದಳು.

ಹಸನ್ನನ ಹೆಂಡತಿ ಸ್ನಾನಶಾಲೆಯೊಳಗೆ ಕಾಲಿಡುತ್ತಿರುವಾಗ, ಅಲ್ಲಿರುವ ಹೆಂಗುಸರೆಲ್ಲಾ ಆತ್ಯಾಶ್ಚರ್ಯದಿಂದ ಕಣ್ಣಗಲಿಸಿಕೊಂಡು ಅವಳನ್ನೇ ನೋಡತೊಡಗಿದರು. ಕೆಲವರು ಮಾಡಿಕೊಂಡಿದ್ದ ಸ್ನಾನವನ್ನು ಕೂಡಾ ಮರೆತು ಬಾಯಿ ತೆರೆದು ಅವಳನ್ನೇ ನೋಡತೊಡಗಿದರು.

ಇದೇ ಸಮಯದಲ್ಲೇ ರಾಣಿ ಜುಬೇದಾಳ ದಾಸಿ ತೂಫಾ ಎಂಬವಳು ಆ ಸ್ನಾನಶಾಲೆಯೊಳಗಿದ್ದಳು. ಅವಳು ಹಸನ್ನನ ಹೆಂಡತಿ ಅಲ್ಲಿರುವಷ್ಟು ಹೊತ್ತಿನವರೆಗೂ ರೆಪ್ಪೆಬಡಿಯದೆ ಅವಳನ್ನೇ ನೋಡುತ್ತಿದ್ದುದು ಮಾತ್ರವಲ್ಲದೆ, ಅವಳು ತನ್ನ ಅತ್ತೆಯೊಂದಿಗೆ ಹೋಗುತ್ತಿದ್ದಾಗ, ಹಿಂದೆಯೇ ಅವರ ಮನೆಯವರೆಗೂ ಹೋಗಿ, ಆಮೇಲೆ ಮಹಾರಾಣಿಯ ಬಳಿಗೆ ಹಿಂದಿರುಗಿ, ತಾನು ನೋಡಿದವಳ ಅತಿರೇಕ ಅಂದ ಚಂದಗಳ ರಮಣೀಮಣಿಯನ್ನು ಕುರಿತು ರಾಣಿಯೊಂದಿಗೆ ವರ್ಣಿಸಿ ವರ್ಣಿಸಿ ಹೇಳಿದಳು.

ತೂಫಾ ಎಂಥವಳೆಂದು ರಾಣಿಗೆ ಗೊತ್ತು. ಅವಳು ನೋಡುವ ಸುಂದರಿಯನ್ನು ಆತುರವಾಗಿ ಮೆಚ್ಚಿಕೊಳ್ಳುವವಳಲ್ಲ. ಯಾರ ಸೌಂದರ್ಯವನ್ನು ಕುರಿತೂ ಅಷ್ಟೊಂದು ಪರವಶಳಾಗಿ ಮಾತಾಡಳು. ಆದುದರಿಂದ ಈ ಅಪರೂಪವಾದ ಸೌಂದರ್ಯದ ರಾಶಿಯನ್ನು ಸ್ವಯಂನೋಡಬೇಕೆಂದು ಜುಬೇದಾ ರಾಣಿಗೆ ಬಲವಾದ ಕುತೂಹಲ ಉಂಟಾಯಿತು. ಆ ಸುಂದರೀಮಣಿಯ ಹೆಸರು ತೂಫಾಳಿಗೆ ತಿಳಿಯದಾದರೂ ಅವಳಿರುವ ಮನೆ ಗೊತ್ತಾಗಿತ್ತು. ಅಷ್ಟು ಗೊತ್ತಾದರೆ ಸಾಕಲ್ಲ !

ಜುಬೇದಾ ಖಲೀಫರ ಅಂಗರಕ್ಷಕನಾದ ಮಸ್ರೂರನ್ನು ಕರೆಯಿಸಿ, ಆ ಮನೆಯ ಗುರುತು ಹೇಳಿ, "ಅಲ್ಲಿರುವ ಆ ಸುಂದರೀಮಣಿಯನ್ನು ಕರೆದುಕೊಂಡು ಬಾ. ಒಬ್ಬನೇ ತಿರುಗಿ ಬಂದರೆ ನಿನ್ನ ತಲೆ ಹಾರುತ್ತದೆ" ಎಂದಳು. (ಇನ್ನೂ ಇದೆ)



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫

### ಗೆದ್ದ ಶೀರ್ಷಿಕೆಗಳು ೧೯೮೨ ಮೇ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ



P. Sundaram



Devidas Kasbekar

* ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.
* ಮಾರ್ಚಿ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.
* ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪಾಯಿ ೨೫ ಬಹುಮಾನ.
* ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಆದರಲ್ಲಿ ಬೇರೆ ವಿಷಯ ಬರೆಯ ಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು-೬೦೦೦೨೬

---

## ಜನವರಿ ಸ್ಪರ್ಧೆಯ ಫಲಿತಾಂಶ:

ಮೊದಲನೇ ಫೋಟೋ: ಮಕ್ಕಳ ಆಸಕ್ತಿಗಳಿಗೆ

ಎರಡನೇ ಫೋಟೋ: ಮಾತೆಯೋ ಆದರ್ಶ

ಕಳುಹಿಸಿದವರು: ಅನುಪಮ, ಬೆಂಗಳೂರು-೪

(ಬಹುಮಾನ ರೂ. ೨೫ ತಿಂಗಳಾಖೈರಿನೊಳಗೆ ಕಳುಹಿಸಲಾಗುವುದು)

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor: NAGI REDDI.

## ಎಲ್ಲಾ ಪತ್ರಿಕೆ ಅಂಗಡಿಗಳಲ್ಲೂ ಲಭ್ಯ

# ನಿಮ್ಮ ನೆಚ್ಚಿನ ಚಂದಮಾಮ ಅರ್ಪಿಸುವ ಮತ್ತೊಂದು ಸ್ವಾರಸ್ಯಕರ ವಿಕಟ ಚಿತ್ರಾವಳಿ, ಕ್ಲಾಸಿಕ್ಸ್ ಅಂಡ್ ಕಾಮಿಕ್ಸ್

ಮನೋರಂಜಕ, ಸ್ವಾರಸ್ಯಪೂರ್ಣ ವರ್ಣರಂಜಿತ ಕಾಮಿಕ್ಸ್ ಕೇವಲ ರೂ. 2/- ವಾರ್ಷಿಕ ಚಂದಾ ಕೇವಲ ರೂ. 48/-






# ವಾಲ್ಟ್ ಡಿಸ್ನಿಯವರ ವಿಚಿತ್ರ ಪ್ರಪಂಚ

ಕಾಮಿಕ್ಸ್‌ಗಳಲ್ಲಿ ಒಂದು ಹೊಸ ಕಲ್ಪನೆ

7116 KN

# 50% ಉಳಿಸಿರಿ

ಎರಡರ ಅವಶ್ಯಕತೆ ಇದ್ದಾಗ ಒಂದನ್ನೇ ಕೊಳ್ಳಿರಿ!








## ಕ್ಯಾಮ್ಲಿನ್ "ಅನ್‌ಬ್ರೆಕೆಬಲ್" ಪೆನ್ಸಿಲ್‌ಗಳು ಹೆಚ್ಚು ಕಾಲ ಬಾಳುತ್ತವೆ.

ಶ್ರೇಷ್ಠ ರೀತಿಯಿಂದ ಕಾಂಪ್ರೆಸ್ ಮಾಡಲ್ಪಟ್ಟ ಸೀಸುಗಳು....ಕಾಳಜಿಪೂರ್ವಕವಾಗಿ ಆಯ್ದ ಬಾಳಿಕೆ ಬರುವ ಮರ....ಇವೆರಡು ವಿಶೇಷ ವಿಧಾನದಿಂದ ಕೂಡಿಸಲ್ಪಟ್ಟಿವೆ. ತುದಿಯನ್ನು ಚೂಪುಗೊಳಿಸುವಾಗ ಸೀಸು ಮುರಿಯದಂತೆ ಕೇವಲ ಕ್ಯಾಮ್ಲಿನ್ ಅವರು ಉತ್ಕೃಷ್ಟವಾಗಿ ತಯಾರಿಸಿದ್ದಾರೆ. ಹೆಚ್ಚು ಕಾಲ ಬಾಳುವ ಪೆನ್ಸಿಲ್‌ಗಳು ಈಗ ನಿಮಗೆ ದೊರೆಯುತ್ತವೆ... ಇತರ ಸರ್ವಸಾಮಾನ್ಯ ಪೆನ್ಸಿಲ್‌ಗಳಿಗಿಂತ ಸುಮಾರು ಎರಡು ಪಟ್ಟು ಹೆಚ್ಚು ಸಮಯ ಬಾಳುತ್ತವೆ. ಈಗ ಎಲ್ಲಾ ಕ್ಯಾಮ್ಲಿನ್ ಅವರ ಅನ್‌ಬ್ರೆಕೆಬಲ್ ಪೆನ್ಸಿಲ್‌ಗಳು ವಿಶೇಷ ಗುರುತಿನೊಂದಿಗೆ ದೊರೆಯುತ್ತವೆ. ಅದರಿಂದಾಗಿ ನಿಮಗೆ ಗುರುತಿಸುವುದು ಸುಲಭವಾಗುತ್ತದೆ. ಪೆನ್ಸಿಲ್ ಕೊಳ್ಳುವಾಗ ಈ ಗುರುತನ್ನು ನೋಡಿಯೇ ಕೊಳ್ಳಿರಿ ಹಾಗೂ ಹಣ ಉಳಿಸಿರಿ.

**ಈ ಹೆಸರುಗಳನ್ನು ನೋಡಿರಿ. ಇವು ಉತ್ತಮಿಕೆಯ ಭರವಸೆಯ ಹೆಸರುಗಳು: ತ್ರಿವೇಣಿ, ಸುಪ್ರೀಮ್ ಎಕ್ಸೆಲ್ಲಾ, ರಿಗಲ್**




**ಕ್ಯಾಮ್ಲಿನ್**

ಅನ್‌ಬ್ರೆಕೆಬಲ್ ಪೆನ್ಸಿಲ್ಸ್






ಕ್ಯಾಮ್ಲಿನ್ ಪ್ರೈವೇಟ್ ಲಿಮಿಟೆಡ್
ಆರ್ಟ್ ಮಟೀರಿಯಲ್ ಡಿವಿಜನ್
ಮುಂಬಯಿ 400 059

ಕ್ಯಾಮೆಲ್ ಆರ್ಟ್ ಮಟೀರಿಯಲ್‌ನ ತಯಾರಕರು

VISION/795/R/KAN

**Results of Chandamama—Camlin Colouring Contest No. 22 (Kannada)**

*1st Prize:* Sanjay K. Bhat, Kumte-581-343. *2nd Prize:* T. Ashok Kumar, Puttur. *3rd Prize.* K. Jagadeesh, Puttur. *Consolation Prizes:* Kishor V. Netrakar, Karnataka-581401. Vinoda S. Shetty, Bombay-400 031. Dinesh, Mysore-570 004. M. K. Asha, Mysore 570 004 K. Shashi Kumar, Gundlupet-571 111.